# ಕಥೆಗಳ ಅಟ್ಟುಳಿ

(ಜನಪದ)



ಭವಾನಿಶಂಕರ್ ಅಡ್ತಲೆ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

ದಶವರ್ಷ ಸಂಭ್ರಮದ ಪುಸ್ತಕಮಾಲಿಕೆ – 2022

# 'ಕಥೆಗಳ ಅಟ್ಟುಳಿ'

(ಜನಪದ)

ಭವಾನಿಶಂಕರ್ ಅಡ್ತಲೆ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಮಡಿಕೇರಿ

Decennial Year Publication Series 2022

**ಕಥೆಗಳ ಅಟ್ಟುಳಿ**

ಅರೆಭಾಷೆ ಜನಪದ ಕಥೆಗ

**Kathegala Attuli**
Arebhashe Folktale

Written by
**Bhavani Shankar Adthale**

ಸಲಹಾ ಸಮಿತಿ :
**ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ**
**ಶ್ರೀಮತಿ ಬೈತ್ತಡ್ಕ ಜಾನಕಿ ಬೆಳ್ಯಪ್ಪ**
**ಶ್ರೀಮತಿ ಸ್ಮಿತಾ ಅಮೃತರಾಜ್**
**ಡಾ. ವಿಶ್ವನಾಥ ಬದಿಕಾನ**
**ಶ್ರೀ ಭರತೇಶ್ ಅಲಸಂಡೆಮಜಲು**

ಪ್ರಕಟಣೆ :
**ರಿಜಿಸ್ಟ್ರಾರ್**
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

**ಪುಸ್ತಕ ದೊರೆಯುವ ಸ್ಥಳ :**
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,
ಕಾಫಿ ಕೃಪ ಬಿಲ್ಡಿಂಗ್, ಮಹಾತ್ಮ ಗಾಂಧಿ ರಸ್ತೆ, ಮಡಿಕೇರಿ.
ದೂ. : 08272–223055 ಮೊ: 6362522677
arebaseacademy@gmail.com, www.arebhasheacademy.karnataka.gov.in

ಪ್ರಕಟಣೆಯ ವರ್ಷ: 2022

ಪುಟಗಳು : 94
ಬೆಲೆ ರೂ. 100
ಪ್ರತಿಗಳು : 200

ಆಕಾರ : ಡೆಮಿ 1/8
ಕಾಗದ : 80 ಜಿಎಸ್‌ಎಂ ಮ್ಯಾಪ್ಲಿತೋ
ಮುಖಪುಟ ವಿನ್ಯಾಸ : ನಾಗವೇಣಿ ದಾಮೋದರ

ಪುಟ ವಿನ್ಯಾಸ ಮತ್ತು ಮುದ್ರಣ :
ಅಮರಜ್ಯೋತಿ ಪ್ರಿಂಟಿಂಗ್ ಪ್ರೆಸ್
ಕುರುಂಜಿಭಾಗ್, ಸುಳ್ಯ, ದ.ಕ.
Ph :082572-235164, Mob : 7899045164

# ಅಧ್ಯಕ್ಷರ ಮಾತ್

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯ ಪುಸ್ತಕ ಪ್ರಕಟಣೆ ಯೋಜನೆ ಅಡಿಲಿ ಭವಾನಿಶಂಕರ ಅಡ್ತಲೆ ಅವರ ಕಥಾಸಂಕಲನ ಬಾತ್ತಿರ್‌ದು ಕುಸಿನ ಸಂಗತಿ. ಒಂದು ವಿಸಯನ ಇಟ್ಟ್‌ಕಂಡ್, ಹಂಗೆ ಅರೆಬಾಸಿಗರ್ ನಿತ್ಯ ಮಾತಾಡ್‌ವ ಮಾತ್‌ಗಳ ಬಳ್ಸಿಕಂಡ್ ಅದ್ಕೆ ವಿವರಣೆಕೊಟ್ಟ್‌ಕಂಡ್ ಕತೆಯ ರೂಪ ಕೊಟ್ಟ್ ಬರ್ದ್‌ದ್ ಲಾಯಿಕ್ ಆಗುಟ್.

ಅರೆಬಾಸಿಗರ್ ದಿನ ನಿತ್ಯದ ಮಾತ್‌ನ ದಾಟಿನೊಟ್ಟಿಗೆ ನಮ್ಮ ಜೀವನ ಕ್ರಮನ ಸಹಾ ಈ ಕತೆಗಳ ಮೂಲಕ ಹೇಣ್‌ದೊಳೊ. ನಮ್ಮ ನಡುವೆ ಮರ್‌ತೇ ಹೋಗಿರ್ವ ಪದ ಬಳಕೆನ ಬಳಸಿಕಂಡ್ ಅದರ ಸುತ್ತನೇ ಅನೇಕ ಸಂಗತಿಗಳ್‌ನ ಹೇಳ್ತಾ ಹೋಕನ ಕಥೆ ಕೇಳಿಕೆ ಕುಸಿ ಕೊಟ್ಟದೆ. ಹಂಗೆ ಪಂಡ್‌ನ ಬೊದ್‌ಕುವ ಕ್ರಮ ಮತ್ತೆ ಮೂಲ ಅರೆಬಾಸೆನ ಪದಗ ನೆಂಪಿಗೆ ಬಂದದೆ. ಸಣ್ಣ ಸಣ್ಣ ಬರಹಗಳ ಮೂಲಕ ಅರೆಬಾಸೆ ಸಂಸ್ಕೃತಿನ ಬಾಳ ಪೊರ್ಲ್‌ಲಿ ಬಿಚ್ಚಿಟ್ಟೊಳೊ.

ಅರೆಬಾಸೆ ಗಟ್ಟಿಯಾಗಿ ಉಳಿಯಕೆ ಇಲ್ಲಿನ ಬರಹಗ ಮುಕ್ಯ ಆದೆತ ಅಂದ್‌ಕಣೆ. ಅದ್‌ಕ್ಕಾಗಿ ಭವಾನಿಶಂಕರ ಅಡ್ತಲೆ ಅವಿಕೆ ಅಬಿನಂದನೆಗಳ್‌ನ ಸಲ್ಲಿಸಿನೆ.

**ಲಕ್ಷ್ಮೀನಾರಾಯಣ ಕಜೆಗದ್ದೆ**
ಅಧ್ಯಕ್ಷರ್
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

# ಕಥೆಗಳ ಬುತ್ತಿ ಬಿಚ್ಚಿಕೆ ಮುಂದೆ

ಬನ್ನಿ ಮಕ್ಕಳೇ ಕಥೆ ಹೇಳಿನೇಂತ ಅಜ್ಜನೋ, ಅಜ್ಜಿನೋ ಕರ್ದ್ದರೆ, ಓಡಿ ಬಂದ್ ಸುತ್ತ ಕುದ್ದ್; ಕೆಬಿ ನೆಟ್ಟಂಗೆ ಮಾಡುವ ಕಾಲ ಇತ್ತ್. ಹಾಂ..... ಹಾಂ..... ಸುಮ್ಮನಿರಿ, ಅವ್ವ ಕಥೆ ಹೇಳುವೆ ಗಡಾಂತ, ಅಪ್ಪ ಕಥೆ ಹೇಳುವೆ ಗಡಾಂತ ಮಕ್ಕ–ಮಕ್ಕಳೇ ಒಬ್ಬಂದೊಬ್ಬ ಸುಮ್ಮನಿರಿಸಿಕಾಂಬೊ. ಆದರೆ ಈಗ ಅಜ್ಜ, ಅಜ್ಜಿ ಕರ್ದ್ದರೆ; ಅತ್ತ ತಿರ್ಗಿ ಕೂಡ ನೋಡದೆ, ನಿಮ್ಮ ಕಥೆ ಯಾರಿಗೆ ಬೇಕೂಂತ ಕೈಲಿ ಮೊಬೈಲ್ ಹಿಡ್ಕಂಡ್ ಮಕ್ಕ ಮೂಲೆಲಿ ಕುದ್ರುದರ ಕಾಣ್ತ ಒಳೊ. ಆದರೆ ಬಾಯಿಂದ ಬಾಯಿಗೆ, ಕಾಲಂದ ಕಾಲಕ್ಕೆ ಬೆಳೆತಿದ್ದ ಇಂತ ಕಥೆಗಳ ಜನಪದ ಕಥೆಗಂತ ಹೇಳಿಕಂಡ್, ಅದರ ದಾಖಲೆ ಮಾಡಿರೆ ಮಾತ್ರ ಅದ್ ಜಾನಪದ ಕಥೆಗಂತ; ನಾ ನಮ್ಮ ಭಾಷೆಯಾದ ಅರೆಭಾಷೆಲಿ; ಎರಡನೇ ಪ್ರಯತ್ನ ಮಾಡ್ತ ಒಳೆ. ಒಂದಲ್ಲ ಒಂದು ದಿನ ಇದು ಮತ್ತೆ ಜನಗಳಿಗೆ ಬೇಕಾದು. ಎಲ್ಲಿಟ್ಟು ಸಣ್ಣ ಕಥೆಗಾಂತ ಹುಡ್ಕುವ ದಿನ ಬಾದೂಂತ ನಂಗೆ ಬಲವಾಗಿ ಅನ್ನಿಸಿದೆ.

2019ರ ಮಾರ್ಚ್ 2ನೇ ತಾರೀಕ್‌ನಂದ್ ಅರೆಭಾಷೆನ ಸುರೂನ ವಿಶ್ವ ಸಾಹಿತ್ಯ ಸಮ್ಮೇಳನ ಸುಳ್ಯದ ಕೊಡಿಯಾಲಬೈಲಿನ 'ಯುವ ಗೌಡ ಸಂಘ'ದ ಸಭಾಭವನಲಿ ನಡ್ದದೆ. ಸಾಹಿತ್ಯ ಸಮ್ಮೇಳನಂತೇಳಿರೆ ಸಾಹಿತ್ಯ ಪುಸ್ತಕಗಳ ಹಬ್ಬಂತ. ನಮ್ಮ ಕರ್ನಾಟಕ ಅರೆಭಾಷೆ, ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಆಗನ ಅಧ್ಯಕ್ಷರಾದ ಪಿ.ಸಿ. ಜಯರಾಮನೊವು ತಿಳ್ಕೊಂಡಿದ್ದೊ. ಅವರ ನಾಯಕತ್ವಲಿ, ಪುಸ್ತಕ ಪ್ರಕಟಣೆಗಳ ಸಂಚಾಲಕರಾದ ಶ್ರೀ ಎ.ಕೆ. ಹಿಮಕರರವರ ಮಾರ್ಗದರ್ಶನಲಿ ಒಮ್ಮೆಲೇ ಏಳು ಪುಸ್ತಕಗಳ ಬಿಡುಗಡೆ ಮಾಡ್ದೊ. ಅದರ್ಲಿ ಒಂದು ನನ್ನ ಪುಸ್ತಕ ಕೂಡ ಆಗಿತ್ತ್. ಅದುವೇ 'ಅಪ್ಪ ಹೇಳ್ದ ಹತ್ತ್ ಕತೆಗ' ನಿಜವಾಗಿನೂ ಅಪ್ಪ ಹೇಳ್ದ ಹತ್ತ್ ಕಥೆಗಳ ದಾಖಲಿಸಿ ಜನಗಳ ಮುಂದೆ ಇಸಿದೆ. ಅದರ್ಲಿ ನಾಲ್ಕ್ ಸತ್ಯ ಕಥೆಗಳೂ ಇತ್ತ್. ಓದಿದೊವು ಕುಷಿ ಪಟ್ಟ್ ನಂಗೆ ಹಾರೈಸಿದೊ....ನಂಗೂ ಆ ಬಗ್ಗೆ ತುಂಬಾ ಖುಷಿ ಉಟ್ಟು. ಇದ್ ಅರೆಭಾಷೆಲಿ ನನ್ನ ಎರಡನೇ ಪುಸ್ತಕ.

ನಾ ಪಿ.ಯು.ಸಿ. ಓದಿ ಆದ ಮೇಲೆ ನಾಲ್ಕ್ ವರ್ಷ ಮನೇಲಿ ಇದ್ದ್, ಗದ್ದೆ ಬೇಸಾಯ ಮಾಡಿಕಂಡಿದ್ದೆ. ಅಪ್ಪ ಗದ್ದೆ ಬೇಸಾಯನ ಬೇರೆಯೊವುಕೆ ಗೇಣಿಗೆ ಕೊಟ್ಟಿದ್ದೊ. ಅದ್ ಯಾಕೋ ನಂಗೆ ಸರಿ ಕಂಡತ್ಲೆ. ಹಾಂಗೆ ಸ್ವತ: ನಾನೇ ಬೇಸಾಯ ಮಾಡೊಕೂಂತ ಹೊರ್ಟೆ. ಆ ಸಮಯಲಿ ಗದ್ದೆ ಹೂಡ್ದು, ನೇಜಿ ನೆಡ್ದು, ಪಿಂಡಿಬಿತ್ತ್ ಹಾಕುದು, ಗದ್ದೆ ಪುಣಿ ಹಾಕುದು, ಬಡ್ಜಿಲ್ ಕಡಿಯೊದು,

ಗದ್ದೆ ಕೊಯ್ಯೋದು, ಬೇರೆಯವರ ಮನೆಗೆ ಕೂಡಾ ಬೇಸಾಯಲಿ ಸೇರಿಕೊಂಬೋದು. ಇದೆಲ್ಲ ನನ್ನ ಬದ್‌ಕ್‌ಗೆ ಹೊಸ ರೂಪ ಕೊಟ್ಟಿತ್. ಆ ಸಮಯಲಿ ಗದ್ದೆ ಕೊಯ್ಯಕನ, ಕೈ ಹೊಡೆಕನ ಎಲ್ಲ; ಅಪ್ಪ ಕುದ್ದ್‌ಕಂಡ್ ಹೇಳ್ತಿದ್ದ ಕಥೆಗ ಅದೆಷ್ಟೋ. ಆದರೆ ಮರ್ತ್ ಹೋದು ತುಂಬಾ ಕಥೆಗ. ಒಳ್ದದರ ದಾಖಲಿಸೊಕೂಂತ ಮನ್ಸ್‌ಲಿ ಇತ್ತ್. ಈ ಸರ್ತಿ ಮತ್ತೊಮ್ಮೆ ನಂಗೆ ಅವಕಾಶ ಮಾಡಿಕೊಟ್ಟೋವು ಕರ್ನಾಟಕ ಅರೆಭಾಷೆ ಅಕಾಡೆಮಿನ ಈಗನ ಅಧ್ಯಕ್ಷರಾದ ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆ ಮತ್ತು ಅಕಾಡೆಮಿನ ಎಲ್ಲಾ ಪದಾಧಿಕಾರಿಗ. ಇದರ್ಲಿ ನನ್ನ ಊರ್‌ನ ಸದಸ್ಯರ್‌ಗಳಾದ ಶ್ರೀ ಪುರುಷೋತ್ತಮ ಮಾಸ್ತರ್ ಕಿರ್ಲಾಯ ಹಾಂಗೆ ನನ್ನ ಕಾಲೇಜ್ ಜೋಸ್ತಿ ಶ್ರೀ ಕುಸುಮಾಧರ ಅಳ್ಕೆಮಜಲು ಕೂಡ ಸೇರಿಯೊಳೊ. ಅವ್ಕೆಲ್ಲಾ ನಾ ಕೃತಜ್ಞತೆ ಹೇಳ್ತಾ ಒಳೆ.

ಬೇರೆ ಬೇರೆ ಕಾರಣಗಳ್‌ಂದ ಈ ಸಮಯಲಿ ಕೆಲವರ ನೆನ್ಸಿಕಣಕಾದೆ. ಅದರ್ಲಿ ಮುಖ್ಯ ಪಟ್ಟೋವು ನನ್ನ ಹುಟ್ಟಿ ಬೆಳ್ಸಿ ಸಾಂಕಿ, ಗದ್ದೆ ಕೆಲ್ಸ, ತೋಟದ ಕೆಲ್ಸನ ಹೇಳಿ ಕೊಟ್ಟ ನಂಗೆ ವಿದ್ಯೆ, ಬುದ್ಧಿ ಕಲ್ಸಿದ ಇಂದ್ ನನ್ನೊಟ್ಟಿಗಿಲ್ಲದ; ನನ್ನ ಅಪ್ಪ ಸುಬ್ಬಣ್ಣ ಗೌಡ ಮತ್ತೆ ಅಯ್ಯೆ ಹೊನ್ನಮ್ಮನೊವು, ನಂಗೆ ಉದ್ಯೋಗ ಕೊಟ್ಟ, ನನ್ನ ಅನ್ನದಾತರಾಗಿ ಕಣ್ಣಿಗೆ ಕಾಂಬ, ಮತ್ತೆ ನನ್ನ ಬರವಣಿಗೆಗೆ ಯಾಗೋಳು ಬೆನ್ನ್ ತಟ್ಟುವ ಮತ್ತೆ ಈ ಪುಸ್ತಕಕ್ಕೆ ಮುನ್ನುಡಿ ಬರ್ದ ಅಕಾಡೆಮಿ ಆಫ್ ಲಿಬರಲ್ ಎಜ್ಯುಕೇಶನ್ (ರಿ.), ಸುಳ್ಯ ಇದರ ಪ್ರಧಾನ ಕಾರ್ಯದರ್ಶಿಗ ಹಾಂಗೆ ರಾಜ್ಯ ಒಕ್ಕಲಿಗರ ಸಂಘದ ಉಪಾಧ್ಯಕ್ಷರಾದ ಡಾ. ರೇಣುಕಾ ಪ್ರಸಾದ್ ಕೆ.ವಿ.ಯೊವು, ನನ್ನೊಟ್ಟಿಗೆ ಸಣ್ಣದರ್ಲಿ ಆಟ ಆಡಿಕಂಡ್, ಹೊಡ್ಕಂಡ್ ಬಡ್ಕಂಡ್ ಒಟ್ಟಿಗೆ ಬೆಳ್ದ, ಅಪ್ಪ ಹೇಳ್ತಿದ್ದ ಕಥೆಗಳ ನನ್ನೊಟಿಗೆ ಹೇಳಿಕಂಡಿದ್ದ, ಈಗ ನನ್ನೊಟ್ಟಿಗಿಲ್ಲದ ನನ್ನ ಪ್ರೀತಿನ ತೀರಿ ಹೋದ ಅಕ್ಕ ಅಂಬುಜಾಕ್ಷಿನ, ನಾ ಸಣ್ಣದಿರಿಕನ ತೀರಿ ಹೋದ ನನ್ನ ಅಣ್ಣ ಜನಾರ್ಧನ ಗೌಡನ, ಹಾಂಗೆ ತೀರಿ ಹೋದ ನನ್ನ ದೊಡ್ಡ ಅಕ್ಕ ಸುಶೀಲ ಕೊರಂಬಡ್ಕನವರ್, ಈಗ ಕಾಯಿಲೆಲಿ ಬಿದ್ದ್ ಕಷ್ಟ ಬರ್‌ತ್ತಿರುವ ನನ್ನ ನಡುನ ಅಕ್ಕ ಮೀನಾಕ್ಷಿ ಊರುಬೈಲ್‌ನ, ಎಲ್ಲ ಅಕ್ಕನ ಮಕ್ಕಳ, ಅಣ್ಣನ ಮಕ್ಕಳ, ಕಥೆಗಳ ಓದಿ ಮನ್ಸ್‌ಲೇ ಕುಷಿ ಪಡುವ, ಅಭಿಪ್ರಾಯಗ ಇದ್ದರೂ ಹೇಳದೆ ಒಳಂಗಿದೊಳಗೆ ಕುಷಿ ಪಟ್ಟ್‌ಕಂಡ್ ನನ್ನ ಎಲ್ಲ ಕೆಲ್ಸಗಳಿಗೆ ಯಾಗೋಳು ಪ್ರೋತ್ಸಾಹ ಕೊಡುವ ತಾಳ್ಮೆಯ ಮೂರ್ತಿ ನನ್ನ ಪ್ರೀತಿನ ಹೆಣ್ಣ್ ಶ್ರೀಮತಿ ಜಯಲತಾಳ, ಪ್ರೀತಿನ ಎರ್ಡ್ ಕಣ್ಣ್‌ಗಳಂಗೆ ಇರುವ ದೊಡ್ಡ ಮಣಿ ನಿಶ್ಚಿತ್ ಅಡ್ತಲೆ, ಹಾಂಗೆ ಸಣ್ಣ ಮಣಿ ದೀಕ್ಷಿತ್ ಅಡ್ತಲೆನ, ನೀ ಲಾಯಿಕ್ ಬರ್ದಿಯಾ, ಇನ್ನ್ ಎನಾರ್ ಬರಿಯಾಂತ ಯಾಗೋಳು ಹಾರೈಸುವ ದೊಡ್ಡ ಬರಹಗಾರರ್ ನನ್ನ ಗುರುಗ ಡಾ| ಪ್ರಭಾಕರ ಶಿಶಿಲನೊವು, ನಾ ಕೆಲ್ಸ ಮಾಡಿಕಂಡ್ ಇರುವ

ಸಂಸ್ಥೆನ ಮುಖ್ಯಸ್ಥರ್ ನನ್ನೆಲ್ಲಾ ಸಮಸ್ಯೆಗಳ ಅರ್ಥ ಮಾಡಿಕಂಡ್ ನನ್ನೆಲ್ಲಾ ಕೆಲ್ಸಗಳಿಗೆ ಸಮ್ಮತಿಗಳ ಕೊಡುವ ಶ್ರೀ ಚಿದಾನಂದ ಗೌಡ ಬಾಳಿಲನೊವು ಮತ್ತೆ ನನ್ನ ಸಹೋದ್ಯೋಗಿಗ, ದಿನ ನಿತ್ಯ 11 ಗಂಟೆಗೆ ಚಾ ಕುಡಿಯೋಮೊಂತ ಒಟ್ಟು ಸೇರ್‍ಸಿ ಒಂದರ್ಧ ಗಂಟೆ ಕಾಲ ಹರಟೆ ಹೊಡ್ಕಂಡ್ ಹೊತ್ತು ಕಳೆವ ಜೋಸ್ತಿಗ ಶ್ರೀ ಮಾಧವ ಬಿ.ಟಿ., ಶ್ರೀ ಆನಂದ ಖಂಡಿಗ, ಶ್ರೀ ಪ್ರಸನ್ನ ಕಲ್ಲಾಜೆನೊವು ನನ್ನಲ್ಲಿ ಅಳಿಂಚಿಕಂಡಿರುವ ಕಲೆಗ ಚೆಲ್ಲಿ ಹೋಗದಾಂಗೆ, ಬಣ್ಣ ಹೋಗದಾಂಗೆ ಉಳ್ಸಿಕಂಡ್ ಹೋಗುವ ಜೋಸ್ತಿ ಹಾಂಗೆ ಬಂಧು ಲೋಕೇಶ್ ಊರುಬೈಲ್‌ನವರ.

ನಾ ಬರ್ದ ಕಥೆಗಳ ಲಾಯಿಕ್‌ಲಿ ಬೆಳರಚ್ಚು ಮಾಡ್ದ ಮತ್ತೆ ಕಥೆಗಳಿಗೆ ಚಿತ್ರಗಳ ಜೋಡ್ಸಿ, ಮುಖಪುಟ ರಚನೆ ಮಾಡ್ದ ಕೆ.ವಿ.ಜಿ. ಅಮರಜ್ಯೋತಿ ಪ್ರಿಂಟಿಂಗ್ ಪ್ರೆಸ್‌ನ; ದೂರದಂದಳೇ ನನ್ನ ಕಾಂಬಕನ 'ಅಣ್ಣಾ'ಂತ ಕರೆವ ಶ್ರೀಮತಿ ನಾಗವೇಣಿ ದಾಮೋದರನ, ಇವಳೊಟ್ಟಿಗೆ ಬೇರೆ ಬೇರೆ ರೀತಿಲಿ ಸಹಾಯ ಮಾಡ್ದ ಶ್ರೀಮತಿ ಉಮಾದೇವಿ ಆನಂದರವರ, ಅನಿತಾಳ, ನಮ್ಮ ಪ್ರೆಸ್‌ಲೇ ಪ್ರಿಂಟ್ ಮಾಡ್ಸಂತ ಭರವಸೆ ಕೊಟ್ಟ ಮಾಲಕರಾದ ಡಾ. ರೇಣುಕಾಪ್ರಸಾದ್‌ರವರ್, ನನ್ನ ವ್ಯಕ್ತಿತ್ವನ ನಾಲ್ಕ್ ಜನರೊಟ್ಟಿಗೆ ಕೊಂಡಾಡಿ ಸದಾ ಹಾರೈಸುವ ಡಾ. ಉಜ್ವಲ್ ಊರುಬೈಲ್‌ನವರ, ಈ ಬರಹಲಿ ತೊಪ್ಪುಗ ಇದ್ದರೆ ಓದಿ ತಿಳ್ಸಿ. ಏನಾರ್ ಅಧಿಕ ಪ್ರಸಂಗಂತ ಕಂಡರೆ ಹೇಳದೆ ಇರ್‍ಬೊಡಿ. ಪುಸ್ತಕನ ತಕ್ಕಂಡ್ ಓದೋವುಕೆ ನಾ ಪ್ರೀತಿಂದ ಕೈ ಮುಗ್ದನೆ.

**ಶ್ರೀ ಭವಾನಿಶಂಕರ್ ಅಡ್ತಲೆ**

# ಮುನ್ನುಡಿ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯೊವು ಭವಾನಿಶಂಕರ ಅಡ್ತಲೆರವರ 'ಕಥೆಗಳ ಒಟ್ಟುಳಿ' ಪುಸ್ತಕನ ಪ್ರಕಟ ಮಾಡಿಕೆ ಹೊರ್ಟದ್ ಒಳ್ಳದಾತ್. ಅವರ ಕೃತಿಗೆ ಮುನ್ನುಡಿ ಬರೆಯಕೆ ನಂಗೆ ಬಾರಿ ಕುಷಿ ಆದೆ. ಯಾಕೆ ತೇಳಿರೆ ಇವು ತುಂಬಾ ವರ್ಷಂದ ನನ್ನ ಗರಡಿಲೇ ಬೆಳ್ದೊವು ತೇಳಿರೆ ತಪ್ಪಾಕಿಲ್ಲೆ. ಪಿಯುಸಿಂದ ಡಿಗ್ರಿವರೇಗೆ ನನ್ನ ಕಾಲೇಜಿಲೇ ಓದಿ, ಕೆಲವು ವರ್ಷಗ ಕೃಷಿ, ರಾಜಕೀಯಾಂತ ಸಮಾಜಲಿ ಕೆಲ್ಸ ಮಾಡ್ದೊವು. ಆ ಸಮಯಲಿ ಮಾಸ್ಟರ್ ಡಿಗ್ರಿ ತಕ್ಕಂಡ್ ಇನ್ನ್ ರಾಜಕೀಯ ಬೇಡಾಂತ ನನ್ನ ಹಕ್ಕಲೆ 1999ರ್ಲಿ ಬಂದ್; ನಂಗೊಂದು ಕೆಲ್ಸ ಕೊಡಿಂತ ಕೇಳಿ, ಈಗ ಸುಮಾರ್ 23 ವರ್ಷಗಳ್‌ಂದ ನನ್ನೊಟ್ಟಿಗೆ ಕೆಲ್ಸ ಮಾಡ್ತ ಒಳೊ.

ಇವು ಕಾಲೇಜ್ ಜೀವನಲಿ ಬರೀತಾ ಇದ್ದೊಂತ ನಂಗೆ ಗೊತ್ತಿತ್ತ್. ಹಾಂಗೆ ನನ್ನ ಆಪ್ತ ಕಾರ್ಯದರ್ಶಿಯಾಗಿ ಆಫೀಸ್‌ಗೆ ಸೇರಿಕಂಡ ಮೇಲೆ ಇವರೊಟ್ಟಿಗೆ ಬರಹಕ್ಕೆ ಸಂಬಂಧಪಟ್ಟ ಎಲ್ಲಾ ಕೆಲ್ಸನ ಮಾಡ್ಸ್ತಿದ್ದೆ. ನಾ ಕೆಲವು ಶಬ್ದಗಳ ಇವ್ಕೆ ಅರ್ಥ ಆಗುವಾಂಗೆ ಹೇಳಿರೆ, ನಂಗೆ ತೃಪ್ತಿ ಆಗುವಾಂಗೆ ಬರೆತ್ತಿದ್ದೊ. ಇನ್ನೂ, ಇನ್ನೂ ಬರೆಯೊಕುಂತ ಇವರೊಟ್ಟಿಗೆ ಹೇಳ್ತಾನೆ ಒಳೆ. ಆದರೆ ಅವ್ಕೆ ಬರೆಯಕೆ ಪುರುಸೊತ್ತು ಆಗದೆ ಸುಮಾರ್ ಬಾಕಿ ಉಟ್ಟುಂತ ನಂಗೆ ಅನ್ಸಿದೆ. ಇವರ ಸುರುನ ಅರೆಭಾಷೆ ಕೃತಿ 'ಅಪ್ಪ ಹೇಳ್ದ ಹತ್ತ್ ಕಥೆಗ' ಸುಳ್ಯದ ಅರೆಭಾಷೆ ವಿಶ್ವ ಸಮ್ಮೇಳನಲಿ ನನ್ನ ಕೈಯಿಂದಲೇ ಬಿಡುಗಡೆ ಮಾಡ್ಸಿದೊ. ಈಗ ಇನ್ನೊಂದು ಪುಸ್ತಕಕ್ಕೆ ಮುನ್ನುಡಿ ಬರೆಕೆ ಕೇಳಿಕೊಂಡೊಳೊ. ಇದರ್ಲಿ ಸಣ್ಣ-ಪುಟ್ಟ ಕಥೆಗ ತುಂಬಾ ಉಟ್ಟು. ಅದರೆಲ್ಲ ದಾಖಲಿಸುವಂತ ಒಳ್ಳೆ ಕೆಲ್ಸನ ಮಾಡ್ತ ಒಳೊ. ಈ ಪುಸ್ತಕ ಮುಂದೆ ಬರುವ ಮಕ್ಕಳಿಗೆ ಪ್ರಯೋಜನ ಆಗಲಿ. ಏಕೆ ತೇಳಿರೆ ಇದರ್ಲಿ ಕೆಲವು ನೀತಿ ಕಥೆಗ, ಕೆಲವು ಸಂಪ್ರದಾಯ, ಆಚರಣೆಗಳ ಕಥೆಗ, ಕೆಲವು ಲಲಿತ ಪ್ರಬಂಧಗಳಾಂಗೆ ಇದ್ದ ಕಥೆಗ ಒಳೊ. ಅರೆಭಾಷೆನ ಲಾಯಿಕ್ ಬಳಕೆ ಮಾಡಿಕಂಡ್, ನಮ್ಮ ಭಾಷೆನ ಬಗ್ಗೆ ಹೆಚ್ಚ್ ಅಭಿಮಾನ ಇರುವ ಇವ್ಕೆ ಒಳ್ಳೆದಾಗಲಿ. ಇದರ್‌ಂದಾಗಿ ನಮ್ಮೊವುಕೆ ಅರೆಭಾಷೆನ ಮೇಲೆ ಪ್ರೀತಿ, ವಿಶ್ವಾಸ ಬೆಳೆಲಿಂತ ನಾ ಆಶಿಸಿನೆ. ಇನ್ನ್ ಕೂಡಾ ಇವು ಹೆಚ್ಚಿಗೆ ಬರೆಕೆ ದೇವ್ರು ಅವಕಾಶ ಕೊಡಲಿ. ಈ ಪುಸ್ತಕನ ಎಲ್ಲವೂ ತಕಂಡ್ ಓದಲಿಂತ ಈ ಮೂಲಕ ಅವ್ಕೆ ಹಾರೈಕೆ ಮಾಡ್ತಾ ಒಳೆ.

**ಡಾ. ರೇಣುಕಾ ಪ್ರಸಾದ್ ಕೆ.ವಿ.**
ಪ್ರಧಾನ ಕಾರ್ಯದರ್ಶಿಗಳು, ಎ.ಓ.ಎಲ್.ಇ (ರಿ.), ಸುಳ್ಯ
ಉಪಾಧ್ಯಕ್ಷರು, ಕರ್ನಾಟಕ ರಾಜ್ಯ ಒಕ್ಕಲಿಗರ ಸಂಘ (ರಿ), ಬೆಂಗಳೂರು

# ಪರಿವಿಡಿ

# 1. ಪುಂದಿ ಹೊಂಕಿತ್



ಒಂದ್ ಊರ್‌ನ ಹಳ್ಳಿಲಿ ಒಂದು ಗಂಡ–ಹೆಣ್ಣ್ ವಾಸ ಇದ್ದೊ. ಅತ್ತ ಶ್ರೀಮಂತರೂ ಅಲ್ಲ. ಇತ್ತ ಬಡವರೂ ಅಲ್ಲಂತ ಹೇಳ್‌ಕ್. ಉಂಬಕೆ–ತಿಂಬಕೆ, ಬಟ್ಟೆ–ಬರೆ, ದೆವ್ವ–ದೇವ್ರುಗೆಂತ ಕೊಟ್ಟ್‌ಕಂಡ್ ಲಾಯಿಕ್‌ಲಿ ಇದ್ದೊ. ಆದ್ರೆ ದೇವ್ರು ಎಲ್ಲ ಕೊಟ್ಟರೂ ಏನಾರ್ ಒಂದ್ ಕೊರ್ತೆನ ಮನುಷ್ಯಂಗೆ ಕೊಡದೆ ಇರ್ದುಲೆ. ಇವ್ಕೆ ಕೂಡಾ ಹಾಂಗೆ ಆತ್. ಅದ್ ಎಂತ ತೇಳ್ರೇ ಇವ್ಕೆ ಮೂರು ಜನ ಹೆಣ್ಣ್ ಮಕ್ಕ. ನೋಡಿಕೆ ಪೊರ್ಲುನ ಗೂಡೆಗ. ಮೈ ಕೈ ತುಂಬಿಕಂಡ್ ಬೇಪರ ಚೋರೆಗಳಾಂಗೆ ಇದ್ದೊ. ಉದ್ದದ ಕೂದಲ್‌ನ ಜೆಡೆ ಹಾಕಂಡ್, ತಲೆಗೆ ಏನಾರ್ ಹೂವುನ ಸಿಕ್ಕಿಸಿಕಂಡ್ ಇವು ಓಡಾಡ್ರೆ ಸಾಕ್. ಒಮ್ಮೆ ಮೀಸೆ ಬಂದವ ಇವರ ಕಡೆ ನೋಡದೆ ಇರಿಕಿಲೆ. ಅದ್ರೆ ಈ ಮೂರು ಹೆಣ್ಣ್ ಮಕ್ಕಳು ಮಾತಾಡ್ದು ಮಾತ್ರ ಕೊಂಞ್. ಹಾಂಗಾಗಿ ಇವರ ಮೊದ್ವೆ ಮಾಡಿ ಕೊಡಿಕೆ ಬಾರೀ ತೊಂದರೆ ಆತ್. ಇವರ ನೋಡಿಕೆ ಬಂದೊವೆಲ್ಲಾ ಇವು ಮಾತಾಡ್ದರ ಕೇಳಿ, ಗೂಡೆ ಬೇಡಾಂತ ಹಾಂಗೆ ಹೋವೊ. ಕೊಂಞ್ ತೇಳಿರೆ ಗೊತ್ತುಟ್ಟಲ್ಲಾ ? ಸಣ್ಣದರ್ಲಿ ಮಕ್ಕ ಮಾತಾದ್ದಾಂಗೆ ಮಾತಾಡ್ದು. ಹೆಣ್ಣ್ ಮಕ್ಕಳಿಗೆ ಪ್ರಾಯನೂ ಬೆಳಿತಾ ಬಾತ್. ದೊಡ್ಡವಳಿಗೆ ಇಪ್ಪತ್ತು. 2ನೇವಳಿಗೆ 19, ಕಡೇ ಗೂಡೆಗೆ 18. ಅಂದರೆ ಇವು ವರ್ಷ ಮಕ್ಕ. ಇವು ಮೂರು ಒಟ್ಟಿಗೆ ಹೋದರೆ ಅಕ್ಕ ಯಾರ್, ತಂಗೆ ಯಾರೂಂತ ಗೊತ್ತಾಕ್ಕಿಲ್ಲೆ.

ಎಷ್ಟೋ, ಕಡೆಂದ ಹೈದಂಗ ಬಂದ್, ಇವು ಮಾತಾಡ್ದರ ನೋಡಿ ಬೇಡಂತ ಹೋಗ್ತಾ ಇದ್ದೊ. ಹೈದಂಗ ಬಂದದೇ ಬಂದದ್, ದಾರಿ ಸನ್ದಂದೇ ಸನ್ದಂದ್. ಎಂತ ಮಾಡ್ದು. ಗಂಡ ಹೆಣ್ಣ್‌ಗೆ ಇದೇ ಚಿಂತೆ. ಇದ್ದ ದೆವ್ವ–ದೇವ್ರುಗೆಲ್ಲ ಹರ್ಕೆ ಹೇಳಿಕಂಡ್ ಆತ್. ಪ್ರಾಯಕೆ ಬಂದ ಮಕ್ಕಳ ಮೊದ್ವೆ ಮಾಡದಿದ್ದರೆ, ಅದರ ಬೇನೆ ಹೆತ್ತೊವುಕೇ ಗೊತ್ತ್. ಏನ್ ಮಾಡ್ದು?

ಹೀಂಗಿರಿಕನ ಒಂದು ದಿನ ಒಂದು ಕಡೆಂದ ಹೈದ ಬಾದುಂತ ಯಾರೋ ಹೇಳಿ ಕಳ್ಸಿದೊ. ಅಂದ್ ಅರ್ಜಂಟ್ ಅಯ್ಯೆ-ಅಪ್ಪಂಗೆ ಯಾವುದೋ ಕೆಲ್ಸಕ್ಕೆ ಪೇಟೆಗೆ ಹೋಕಿತ್ತ್. ಈ ಹೈದಂಗ ಬಾದು, ಗೂಡೆ ನೋಡ್ದು, ಮತ್ತೆ ಆದುಲೆಂತ ಹೇಳ್ದು. ಇದ್ ಮಾಮೂಲಿ ಆದರ್‌ಂದ ಅದರ ಬಗ್ಗೆ ಹೆಚ್ಚ್ ತಲೆ ಕೆಡ್ಸಿಕಣದೆ, ಮಕ್ಕಳೊಟ್ಟಿಗೆ ಅಯ್ಯೆಪ್ಪ ಜಾಗ್ರತೆ ಹೇಳಿ, ನೀವೆ ಎಲ್ಲ ಸುದರ್ಸಿಂತ ಹೇಳ್ದೊ. ಈ ಸರ್ತಿ ನೀವು ನೆಂಟ್ರ್ ಬಂದರೆ ಮೂರು ಜನ ಸಹ ಒಟ್ಟಿಗೆ ಇರಿನಿ. ನೆಂಟ್ರಿಗೆ ಉಪಚಾರ ಮಾಡಿ. ಅದ್ರೆ ಮೂರು ಜನ ಸಹ ಮಾತಾಡದೆ. ಅವ್ಕೆ ಕುಡೆಕೆ, ತಿಂಬಕ್ಕೆ ಎಲ್ಲ ಕೊಡಿ. ದೊಡ್ಡ ಅಕ್ಕ ಮಾತ್ರ ಸೀರೆ ಉಟ್ಟ್ ಲಾಯಿಕ್ ಡ್ರೆಸ್ ಮಾಡಿಕಣ್ಲಿ ನೀವಿಬ್ಬೊರು ಉದ್ದ ಲಂಗ, ರವಿಕೆ ಹಾಕಣಿಂತ ಹೇಳಿ ಮಕ್ಕಳೊಟ್ಟಿಗೆ ಮತ್ತೊಮ್ಮೆ ಜಾಗ್ರತೆ ಹೇಳಿ ಇವು ಪೇಟೆಗೆ ಹೊರ್ಟೊ. ಅಯ್ಯೆ-ಅಪ್ಪ ಪೇಟೆಗೆ ಹೋಗಿ ಸುಮಾರ್ ಹೊತ್ತಿಗೆ ನೆಂಟ್ರ್ ಬಂದೊ. ಹುಡ್ಗ ಅವನ ಅಯ್ಯೆನು-ಅಪ್ಪನು ಬಂದಾಂಗೆ ನೆಂಟ್ರಿಗೆ ನೀರ್ ಕೊಟ್ಟೊ. ಮೂರು ಜನ ಸಹ ಒಳಗೆ ಹೋಗಿ ಕುಡ್ಯಕೆ ನಿಂಬೆ ಹುಳಿ ಸರಬತ್ತ್ ಮತ್ತೆ ಅವಲಕ್ಕಿ ಕಲ್ಸಿದ್ ತಂದ್ ಕೊಟ್ಟೊ. ಹಂಞ ಹೊತ್ತಿಗೆ ಮೂರು ಜನ ಸಹ ನೆಂಟ್ರಿಗೆ ಚಾ ಮಾಡಿಕೆ ಒಳಗೆ ಹೋದೊ. ಬಂದೊವುಕ್ಕೆ ಸೀರೆ ಉಟ್ಟದ್ ದೊಡ್ಡ ಗೂಡೆಂತ ಗೊತ್ತಾತ್. ಗೂಡೆ ಆದೂಂತ ಹೈದಂಗೂ ಆತ್. ಮೂರು ಜನ ಒಂದೇ ತರ ಒಳೊಂತ ಮಾತಾಡಿಕಂಡೊ. ಗೂಡೆಗಳ ಅಯ್ಯೆ-ಅಪ್ಪ ಪೇಟೆಗೆ ಹೋದರ, ಮೊದ್ಲೆ ಕರ್ಕಂಡ್ ಬರವಂಗೆ ಹೇಳ್ದರ್‌ಂದ ಇವು ಏನೂ ಕೇಳ್ತ್ಲೆ. ಮತ್ತೆ ಚಾ ಕುಡೆಕೆ ಇವು ನೀರ್ ತಕಂಡ್ ಬಂದೊ. ಮೂರು ಜನ ಸಹ ಕೈ ತೊಳ್ದ್ ಮೊಂದ್ರಿಲಿ ಕುದ್ದೊ. ಗೂಡೆಗ ಕುದ್ದೊಕೆ ಬಾಳ್ಲೆ ಹಾಕಿದೊ. ದೊಡ್ಡ ಗೂಡೆ ನೆಂಟ್ರ್‌ಗೆ ಪುಂಡಿ ಇಕ್ಯಂಡ್ ಬಾತ್. ಹೈದನ ಅಪ್ಪಂಗೆ ಇರ್‍ಕಕನ ಒಂದು ಪುಂಡಿ ಹೊಣ್ಕೆ ಬಾಳ್ಲೆಂದ ಹೊರಗೆ ಹೋತ್. ಆಗ ಗೂಡೆಗಳಿಗೆ ಅಯ್ಯೆ-ಅಪ್ಪ ಹೇಳ್ದ್ ನೆಂಪೇ ಇಲ್ಲದೆ 'ಓ ನೆಂತ್ರ ಬಾಲೆಲೆಂದ ಪುಂದಿ ಹೊಂಕಿತ್'ಂತ ಹೇಳ್ತ್. ಆಗ ಎರಡ್ನೆ ಗೂಡೆ ಒಟ್ಟಿಗೆ ಹೇಳ್ತ್ 'ಏ ನಿಂಗೆ ಅವ್ವ-ಅಪ್ಪ ಪಾತಾದ್‌ಬದಂತ ಹೇಳ್ದ್ ನೆಂಪುಲ್ಲೆನಾಂತ' ಕೇಳ್ತ್. ಆಗ 3ನೇ ಗೂಡೆ ಹೇಳ್ತ್ 'ಯಾರು ಪಾತಾಡಿರೂ ನಾ ಪಾತಾಡಿಕಿಲ್ಲೆಂತ' ಹೇಳಿ ಒಳಗೆ ಓಡ್ತ್. ಗೂಡೆ ನೋಡಿಕೆ ಬಂದೊವು ಮೋರೆ ಮೋರೆ ನೋಡಿ ಕಂಡೊ. ಒಂದು ಕಡೇಲಿ ಅವ್ಕೆ ಬೇಜಾರ್ ಆತ್. ವೋ ದೇವ್ರು ಇಂತ ಅನ್ಯಾಯ ಮಾಡಿಕೆ ಬೊತ್ತಾತ್‌ಂತ ಮನ್ಸ್‌ಲಿ ನೆನ್ಸಿಕಂಡೊ. ಅವು ಇಕ್ಕಿದ ಪುಂಡಿನೂ, ಕಾಯಿ ಹಾಲೂನು ತಿಂದ್. ನಾವು ಬಂದವೆಂತ ಹೇಳಿ ಅವು ಅವರ ಊರಿಗೆ ಹೊರ್ಟೊ. ಹೋದ ಮೇಲೆ ಗೂಡೆ ಬೇಡಂತ ಹೇಳಿ ಕಳ್ಸಿದೊ. ಆ ಗೂಡೆಗಳ ಮೊದ್ವೆ ಯಾಗ ಆದುಂತ ನಂಗೆ ಗೊತ್ತ್ಲೆ. ನೀವು ಯಾರಾರ್ ರೆಡಿ ಒಳೆರಿಯಾ?

****

# 2. ರಾಜ–ರಾಜಕುಮಾರ



ಒಂದು ಊರ್‌ಲಿ ಒಂದು ರಾಜ ಇತ್ತ್. ಅವಂಗೆ ಒಬ್ಬನೇ ಮಜ. ಈ ರಾಜಂಗೆ ಚೂರು ಪ್ರಾಯ ಆದರೂ ಗಟ್ಟಿ ಮುಟ್ಟು ಇತ್ತ್. ನಾವ್ಗೆಲ್ಲ ಇತಿಹಾಸ ಓದಿ ಗೊತ್ತುಟ್ಟು. ಮುಂದೆನ ಕಾಲಲಿ ರಾಜರ್ ಎಷ್ಟ್ ಮೊದ್ವೆ ಬೇಕಾರ್ ಆಕ್. ಆಗ ಈಗನಾಂಗೆ ಪ್ಯಾಮಿಲಿ ಪ್ಲಾನಿಂಗ್ ಇತ್ಲೆ. ಆಮೇಲೆ ಏಕ ಪತ್ನಿತ್ವ ಅನ್ನುದು ಇತ್ಲೆಕಂಡದೆ. ಏನೇ ಇರ್ಲಿ ಈ ರಾಜನೂ, ರಾಜ ಕುಮಾರನೂ ಒಂದು ದಿನ ಗಾಳಿ ತಿಂಬಕೆಂತ ಕುದುರೆ ಮೇಲೆ ಹೊರಟೊ. ಹೀಂಗೆ ಹೊರಟೊವು ಪ್ರಯಾಣ ಮಾಡಿಕಂಡ್ ಮಾಡಿಕಂಡ್ ಒಂದು ಸಮುದ್ರ ಕರೆಗೆ ಬಂದೊ. ಸಮುದ್ರ ಕರೇಲಿ ಬಾಕನ ಪೊಯ್ಯಲಿ ಎರಡ್ ರೀತಿನ ಕಾಲ್ ಹೆಜ್ಜೆಗಳ ನೋಡ್ದೊ. ಅದ್ ಯಾರ್‌ದೋ ಹೆಣ್ಮಕ್ಕಳ ಹೆಜ್ಜೆಂತ ಗೊತ್ತಾತ್. ರಾಜ–ರಾಜಕುಮಾರ ಅಂದ್ರೆ ಅಪ್ಪನೂ–ಮಜನೂ ಈ ಹೆಜ್ಜೆಗಳ ನೋಡಿ ಒಂದ್ ತೀರ್ಮಾನಕ್ಕೆ ಬಂದೊ. ಈ ಹೆಜ್ಜೆಗ ಎಲ್ಲಿವರೆಗೆ ಹೋಗುಟ್ಟು, ಅಲ್ಲಿವರೆಗೆ ಹೋಗಿ ಅವರ ಹುಡ್ಕೊಮೊ. ಅದ್ರೆ ಅದ್ಕೆ ಮೊದಲೆ ನಮ್ಮ ತೀರ್ಮಾನ ಏನ್‌ಂತೇಳ್ರೇ ಈ ದೊಡ್ಡ ಹೆಜ್ಜೆನ ಹೆಣ್ಣ್‌ನ ರಾಜ ಅಂದ್ರೆ ಅಪ್ಪ ಮೊದ್ವೆ ಆದು. (ದೊಡ್ಡ ಹೆಜ್ಜೆದ್ ಅಯ್ಯೆನೇ ಆಗಿರೋಕು ತೇಳುವ ಆಧಾರಲಿ) ಸಣ್ಣ ಹೆಜ್ಜೆನ ಹೆಣ್ಣ್‌ನ ರಾಜಕುಮಾರ ಅಂದ್ರೆ ಮಜ ಮೊದ್ವೆ ಆದುಂತ ತೀರ್ಮಾನ ಆತ್. ಆದುಂತ ಇಬ್ಬರೂ ಕುದ್ರೆ ಹತ್ತಿ ಸಮುದ್ರ ಕರೇಲಿ ಹೊರ್ಟೊ. ಹೋಗ್ತಾ . ಹೋಗ್ತಾ ಸುಮಾರ್ ದೂರ ಹೋಕನ ಆ ಇಬ್ಬರು ಹೆಣ್ಣ್ ಮಕ್ಕ ಕಾಂಬಕೆ ಸಿಕ್ಕಿದೊ. ಅವು ಸಹ ಹಿಂಬೊತ್ತ್ ಗಾಳಿ ತಿಂಬಕೆಂತ ಸಮುದ್ರ ಕರೆಗೆ ಬಂದೋವು. ಅವು ಆ ಊರ್‌ನ ಜನಗಳೇ ಆಗಿದ್ದೊ. ಆದರೆ ಅಲ್ಲಿ ಒಂದ್ ತಪ್ಪಾಗಿತ್ತ್. ಏನ್‌ಂತೇಳ್ರೆ, ಇವು ಲೆಕ್ಕ ಹಾಕಿದಾಂಗೆ ಆಗದೆ ದೊಡ್ಡ ಹೆಜ್ಜೆನ ಹೆಣ್ಣ್ ಮಗಳ್‌ದಾಗಿತ್ತ್, ಸಣ್ಣ ಹೆಜ್ಜೆನ ಹೆಣ್ಣ್ ಮಗಳ ಅಯ್ಯೆದ್ ಆಗಿತ್ತ್. ಇವರ ಒಪ್ಪಂದ ಪ್ರಕಾರ ದೊಡ್ಡ ಹೆಜ್ಜೆನ ಹೆಣ್ಣ್ ಅಪ್ಪ–ರಾಜಂಗೆಂತ ಅದ್‌ರ್‌ಂದ ಅದರ ಅಂದರೆ ಮಗಳ ಅಪ್ಪನೂ ಸಣ್ಣ ಹೆಜ್ಜೆನ ಅಯ್ಯೆನ ರಾಜಕುಮಾರ ತೇಳಿರೆ ಮಜನೂ ಮೊದ್ವೆ ಆದೊ. ಆಗನ ಕಾಲಲಿ ಒಪ್ಪಿದ್ ಒಪ್ಪಿದಾಂಗೆ ಹಾಂಗಾಗಿ

ಅದೇ ರೀತಿ ಸಂಸಾರ ನಡ್ಸಿದೊ. ಹೀಂಗೆ ಅಪ್ಪಂಗೂ, ಮಜಂಗೂ ಒಂದೊಂದು ಗಂಡು ಕೂಸು ಆತ್. ಮಕ್ಕ ಬೆಳಿತಾ ಬೆಳಿತಾ ದೊಡ್ಡೊವು ಆದೊ. ಸುರುಗೆ ಮಾತಾಡಿಕೆ ಕಲ್ತೊ, ಆಮೇಲೆ ನಡಿಯಕೆ ಕಲ್ತೊ. ಎಲ್ಲಾ ಸಂಬಂಧಗಳ ಗುರ್ತ ಮಾಡ್ದೊ ಆದರೆ ಅವ್ಕೆ ಒಂದು ಸಮಸ್ಯೆ ಬಾತ್. ಅದ್ ತೇಳಿರೆ ಈ ಮಕ್ಕ ಒಬ್ಬಂದೊಬ್ಬೊ ಹೇಂಗೆ ಸಂಬಂಧ ಹಿಡ್ದ್ ಕರ್ಯೆಂಕೂಂತ. ಅಂದ್ರೆ ಅಯ್ಯೆನ ಮಜ, ಮೊದ್ವೆ ಆದ್. ಮಗಳ ಅಪ್ಪ ಮೊದ್ವೆ ಆದ್. ಮಕ್ಕ ಒಬ್ಬಂದೊಬ್ಬ ಹೇಂಗಪ್ಪ ಕರ್ಕಂದೂ .? ನನ್ನೊಟ್ಟಿಗೆ ಮಾತ್ರ ಕೇಳ್ಬೋಡಿ. ನೀವ್ಗೆ ಗೊತ್ತಾದರೆ ಹೇಳಿ? ಇದು ಒಂದು ದೊಡ್ಡ ಸಮಸ್ಯೆನ ಸಂಗತಿ. ಉತ್ತರ ನಂಗೆ ಗೊತ್ತಿಲ್ಲೆ. ನೀವ್ಗೆ ಗೊತ್ತಾದ ಕೂಡ್ಲೆ ತಿಳ್ಸಿ.

****

# 3. ಕೋಳಿಗೈಪು–ರೊಟ್ಟಿಕುಕ್ಕೆ



ಒಂದು ಊರ್‌ಲಿ ಒಬ್ಬ ಕೇಪಣ್ಣಂತ ಇತ್ತ್. ಅಂವ ಬರೀ ಸೋಮಾರಿ. ಕೆಲ್ಸ ಮಾಡದೆ ತಿರ್‍ಗಿ ತಿಂಬೊದೇ ಅವನ ಕಾಯಕ. ನೋಡಿಕೆ ಒಳ್ಳ ಗಟ್ಟಿಮುಟ್ಟುನ ಜೀವ. ಹುಲಿ ತಿಂದರೆ ಮೂರು ದಿನ ತಿನೋಕು. ಎಷ್ಟ್ ಸೋಮಾರಿಂತೇಳಿರೆ ಕುದ್ರ್‌ಕನ ಅಡಿ ಊರ್‍ಗಿ ಕೂಡಾ ಕುದ್ರಿಕಿಲೆ. ದಿನ ಪೂರ್ತಿ ಎಲೆ ಅಡಿಕೆ ತಿಂಬೊದು ಹೋದಲ್ಲಿ–ಬಂದಲ್ಲಿ ಉಗ್ಯೋದು. ಸರಿ ತಲೆಗೆ ಎಣ್ಣೆ ಹಾಕಟ್ಟಿಲೆ. ಹಾಕಿದ ಅಂಗಿ ಕುಡ್ತ ಸರಿ ಒಗ್ಯಕ್ಕಿಲೆ. ಬಾಯಿ ನೋಡಿರೆ ಗವರ್‌ಮೆಂಟ್ ಬಸ್‌ನಾಂಗೆ ಯಾಗೋಳು ಕೆಂಪು ಕೆಂಪು. ನೆಗಾಡಿರೆ ಹಲ್ಲ್ ಮಂಜಟ್ಟಿ ಬಿತ್ತ್‌ನಾಂಗೆ ಕಾಂಬೋದು. ಸೊಂಟಲಿ ಒಂದ್ ಚುಡೊಂಕು, ಅವನ ಎಡ ಬ್ಯಾಗ್‌ಲಿ ಯಾಗೋಳು ಎಲೆ ಅಡಿಕೆ ಚೆಂಚಿ ನೇಲಿಕಂಡೇ ಇರ್‍ದು. ಗದ್ದೆಲಿ ಹೊಸೆಪ್ಪು, ಎಲೆ ಅವನೇ ಬೆಳ್ಸುದರ್‌ಂದ ತೋಟದ ಅಡ್ಕೆ ಒಂದು ಒಡ್ಕಂಡರೆ ಆತ್. ತಲೆಗೆ ಒಂದು ಕೆಂಪು ಮುಂಡಾಸ್. ಅದರ ಬಣ್ಣ ಕೆಂಪೊ, ಅಲ್ಲ ಮೊಣ್ಣ್ ಆಗಿ ಕೆಂಪೊ ಗೊತ್ತಿಲ್ಲೆ. ಅಂತು ಅದ್ ಕೆಂಪು ಮಾತ್ರ ಕಂಡದೆ.

ಇಂವ ಯಾರ ಮನೇಲಿ ಗಮ್ಮತಿದ್ದರು, ಉಂಬ ಹೊತ್ತಿಗೆ ಅಲ್ಲಿಗೆ ರೆಡಿ. ಉಂಬ ಹೊತ್ತಿಗೆ ಬಂದವನ; ಹಾಂಗೆ ಕಳ್ಸುದು ಹೇಗೆಂತ ಎಲ್ಲವು ಇದ್ದದರ ಕೊಟ್ಟು ಕಳ್ಸುವೊ. ಇದ್ ಎಲ್ಲಿ ವರೇಗೆ ತೇಳಿರೆ, ಮಕ್ಕ ಬೇಗ ಉಣದಿದ್ದರೆ, ಅಯ್ಯೆಕ, ಇಂದಾ ಬೇಗ ಉಣು ಮಜ ಈಗ ಕೇಪಣ್ಣ ಬಾದು. ಅಂವ ಪೂರ ಉಂಡು ಹೋದು ಮತ್ತೆಂತ; ಹೆದ್ರುಸುತ್ತಿದ್ದೊ. ಅಂವನ ರೂಪ ನೋಡ್ರೆ ಮಕ್ಕ, ಅಂವ ಉಂಬೋದು ಬುಟ್ಟ್ ನಮ್ಮನೇ ತಿಂಬೋಂದುಂತ ಹೆದ್ರಿ ಬೇಗ ಬೇಗ ಉಂಬೊತ್ತಿದ್ದೊ.

ಹೀಂಗೆ ಇರಿಕನ ಒಂದು ದಿನ ಮೆಗಡೆ ರಾಮಣ್ಣ ಗೌಡ್ರಲ್ಲಿ ಯಾರೋ ನೆಂಟ್ರ್ ಬಂದಿದೊ. ಆಗನ ಕಾಲಲಿ ನೆಂಟ್ರ್ ಬಂದರೆ ಪೊಕ್ಕುಳ ರೊಟ್ಟಿನೂ,

ಕೋಳಿ ಗೈಪು ಆಗೇ ಆಕು. ಈಗ ಕೋಳಿಗೈಪು ತೇಳಿರೆ ಊರು ಕೋಳಿಯಾ, ಅಲ್ಲ ಅಂಗಡಿ ಕೋಳಿಯಾಂತ ಕೇಳುವೆ. ಆದರೆ ಆಗನ ಕಾಲಲಿ ಕೋಳಿಗೈಪು ತೇಳಿರೆ ಊರುಕೋಳಿಂತ ಪ್ರತ್ಯೇಕ ಹೇಳೋಕುಂತಿತ್ತಿಲ್ಲೆ. ಬಾರೀ ಅಪರೂಪಕ್ಕೆ ಬಂದ ನೆಂಟ್ರ್‌ಗೆ ಕತ್ತಲೆ-ಕತ್ತಲೆ ಆಕನನೆ, ರಾಮಣ್ಣ ಗೌಡ್ರ್ ಮತ್ತೆ ಹೆಣ್ಣ್ ಕೆಂಚಮ್ಮ ಸೇರಿ ಕೋಳಿಗೈಪು, ರೊಟ್ಟಿಂತ ಅಡುಗೆ ಎಲ್ಲಾ ಮಾಡ್ದೊ. ನೆಂಟ್ರ್ ಬೇಗ ಬೇಗ ಮೀಕಂಡ್ ಬಂದೊ. ಇನ್ನೇನು ಉಂಬಕೆ ರೆಡಿ ಮಾಡಿಕಾಕನ ಈ ಮಾರಿ ಹೈದ ಕೇಪಣ್ಣ ಬಂದೇ ಬಾತ್. ಎಲಾ ಇವನೇಂತ ರಾಮಣ್ಣ ಗೌಡ್ರ್ ಮನ್ಸ್‌ಲೇ ನೆನ್ಸಿ, ಇವಂಗೆ ಇಂದ್ ಎನಾರ್ ಆಗಲಿ ಉಂಬಕೆ ಕೊಡಿಕಿಲೆಂತ ನಿಘಂಟ್ ಮಾಡ್ದೊ. ಎಷ್ಟೋತ್ತಾದ್ದರೂ ಆಗಲಿ; ಕೇಪಣ್ಣ ಹೋಗದೆ ಉಂಬಕ್ಕೆ ನೆಂಟ್ರ್‌ಗೆ ನೀರ್ ಕೊಡ್ಬಡಂತ ಹೆಣ್ಣಿಗೂ ಹೇಳ್ದೊ. ಕೊಂದದ್ದೇ ಸಣ್ಣ ಕೋಳಿ ಇನ್ನ್ ಇವಂಗೆ ಇಕ್ಕಿಕೆ ಹೋದರೆ ಅರ್ಧ ಕೋಳಿ ಬೇಕುಂತ ಹೆಣ್ಣುನೂ ಹೇಳಿಕಂಡತ್. ಬಂದವಂಗೆ ಒಂದು ಗ್ಲಾಸ್ ಕಣ್ಣ ಚಾ ಮಾಡಿ ಕೊಟ್ಟೊ. ಕೇಪಣ್ಣ ಚಾ ಕುಡ್ದ್ ನೆಂಟ್ರೊಟ್ಟಿಗೆ ಮಾತಾಡಿಕೆ ಸುರು ಮಾಡ್ತ್. ಗದ್ದೆ-ಬೇಸಾಯ, ಬೇಟೆಗೆ ಹೋದರ, ನೆಟ್ಟಿ ಮಾಡ್ದರ, ಮದುವೆ-ಬೊಜ್ಜ ಎಲ್ಲ ವಿಷಯ ಮುಗ್ದರೂ ಇವು ಉಂಬಕೆ ಎದ್ರುದುಲೆಂತ ಕೇಪಣ್ಣಂಗೆ ನಿಘಂಟ್ ಆತ್. ಓ ಇವು ಇಂದ್ ನಂಗೆ ಕೊಡಿಕಿಲೆಂತ ಕುದ್ಕಂಡಿರ್‌ಕುಂತ ಸಣ್ಣ ಡೌಟ್ ಬಾತ್. ಏನೇ ಆಗಲಿ ನೆಂಟ್ರ್ ಇರ್‌ಕಾನ ಎಷ್ಟ್ ಹೊತ್ತುಂತ ಕುದ್ರುಸುವೊ, ನೋಡಮೊಂತ ಉಣದೆ ಹೋಕಿಲೆಂತ ಕೇಪಣ್ಣನ್ನೂ ಮನ್ಸ್‌ಲಿ ಹಠ ಹಿಡ್ತ್. ಮತ್ತೆ ಮಾತಾಡಿ, ಮಾತಾಡಿ ಗಂಟೆ 10 ಕಳ್ತ್. ಈಗ ನಾವ್ಗೆ ಹತ್ತ್ ಗಂಟೆ ಮಾಮೂಲಿ. ಆದ್ರೆ ಆಗನ ಕಾಲಲಿ, ಕೆಲವು ಮನೆಗಳ್ಲಿ ದನ ಕೂಡುವ ಹೊತ್ತು ತೇಳಿರೆ 6-7 ಗಂಟೆಗೆ ಮನೆಗಳ್ಳಿ ಉಂಬೊ. ಮತ್ತೆ ದೀಪ ಕೆಡ್ಸಿ ಬೇಗ-ಬೇಗ ಮೊಂದ್ರಿ ಹಾಕಿ ಮಲ್ಗುವೊ. ಬೊಳ್ಪಿಗೆ 4 -5 ಗಂಟೆಗೆ ಎದ್ರುವೊ. ರಾಮಣ್ಣ ಗೌಡ್ರ್‌ಗೆ ವಿಪರೀತ ಸಿಟ್ಟ್ ಬಾಕೆ ಶುರು ಆತ್. ಎಲಾ ಸೂಳೆ ಮಜ ಇಂವ ಹೋದುಲೆಲಾ. ಪಾಪ ನೆಂಟ್ರ್‌ಗೆ ಹೊಟ್ಟೆ ಇಸಿ ಮೋರೆ ಸಣ್ಣ-ಸಣ್ಣದ್ ಆಕೆ ಶುರು ಆತ್. ಎನ್ ಮಾಡ್ದುಂತ ಕುದ್ದಲಿಂದ ಎದ್ದ್. ರಾಮಣ್ಣ ಗೌಡ್ರ್ ಎಲೆ ಅಡ್ಕೆ ಗುದ್ದಿಕೆ ಶುರು ಮಾಡ್ದೊ. ಅಷ್ಟ್ ಹೊತ್ತಿಗೆ ಕೇಪಣ್ಣ ರಪ್ಪ ಎದ್ದ್ ಅಣ್ಣ ನಾ ಹೋನೆ ಹೊತ್ತ್ ಸುಮಾರ್ ಆತ್‌ಂತ ಹೇಳ್ತ್. ಆಗಾರ್ ಉಂಬಕೆ ಹೇಳುವೆನೊಂತ ಆಸೆಂದ. ಊಹೂಂ ಇಲ್ಲೆ. ನೀ ಹೇಂಗೆ ಹೋದಿಯಾ, ಬೊಳ್ಪು ಎಂತ ನಿನ್ನ ಹಕ್ಕಲೆ ಇದ್ದಂಗೆ ಇಲ್ಲೆಂತ ರಾಮಣ್ಣ ಗೌಡ್ರು ಹೇಳ್ದೊ. ಬೊಳ್ಪು ಎಂತ ನಾ ತಾತಿಲ್ಲೆ. ನೀವು ಒಂದು ಸೂಟೆ ಕೊಟ್ಟರೆ ಹೋನೆಂತ ಹೇಳ್ತ್. ಅಬ್ಬ ಮಾರಿ ಒಮ್ಮೆ ಹೋದರೆ ಸಾಕ್‌ಂತ ರಾಮಣ್ಣ ಗೌಡ್ರ್ ಮಜನ ಕರ್ದ್ ಇಂದ ಮಜ ಕೇಪಣ್ಣಂಗೆ ಒಂದ್ ಸೂಟೆ ಕಟ್ಟಿಕೊಡು. ಹೊತ್ತ್ ಸುಮಾರ್ ಆತ್‌ಂತ ಹೇಳ್ದೊ. ಮಜ ಬೇಗ ಬೇಗ ನೀರಡಿ ಕೊಟ್ಟೆಗೆಗೆ ಹೋಗಿ ಮಡ್ಲ್ ತಂದ್ ಸೂಟೆ ಕಟ್ಟಿ, ದೀಪ ಹಿಡ್ದ್ ಕಿಚ್ಚಿ ಹೊತ್ತಿಸಿ ಕೊಟ್ಟತ್. ಕೇಪಣ್ಣ ಉಪಾಯ ಇಲ್ಲದೆ ಮನೆಂದ ಹೊರ್ಟತ್.

ಕೇಪಣ್ಣ ಅತ್ತ ಹೋದಾಂಗೆ ರಾಮಣ್ಣ ಗೌಡ್ರ್ ಹೆಣ್ಣ್‌ಗೆ ಕಣ್ಣ್ ಸನ್ನೆ ಮಾಡಿ ಬೇಗ ಇಕ್ಕಿಕೆ ಹೇಳ್ದೊ. ನೆಂಟ್ರೊಟ್ಟಿಗೆ ಹೇಳಿಕಂಡೊ, ಅಂವ ಯಾಗ ನೋಡಲಿ, ಯಾರೂ; ಯಾರ ಮನೆಗೆ ನೆಂಟ್ರ್ ಬಂದರೂ ಉಂಬಕಾಕನ ಅಲ್ಲಿಗೆ ಎತ್ತಿಕಾಂಬೋದು. ಇಂದ್ ಅಂವಂಗೆ ಕೊಡಿಕಿಲೆಂತ ಹಠಲಿ ಕುದ್ದದ್. ಪಾಪ ಆ ಪಡೆಂದ ಆಗಿ ನೀವ್ಗೆ ಬಾರೀ ಹೊಟ್ಟೆ ಇಸಿರೊಕು. ಬೇಜಾರ್ ಮಾಡ್ಬಡಿ ನೆಂಟ್ರ್‌ಂತ ಹೇಳಿ ಕೈ ತೊಳೆಕೆ ನೀರ್ ಕೊಟ್ಟೊ. ಒಳಗೆ ಹೆಣ್ಣ್ ರೊಟ್ಟಿ ಕುಕ್ಕೆನೂ, ಕೋಳಿಗೈಪುನ ಹಕ್ಕಲೆ–ಹಕ್ಕಲೆ ಇಸಿ, ಇಕ್ಕಿಕೆ ರೆಡಿ ಮಾಡಿಕಾಕನ ಗುಡು–ಗುಡು–ಗುಡು ಯಾರೋ ಓಡಿ ಬಾದು ಶಬ್ದ ಕೇಳ್ತ್. ಎಲ್ಲವೂ ಗಾಬರಿಂದ ಕುದ್ದಲಿಂದ ಎದ್ದ್ ನಿತ್ತೊ. ಈ ಕೇಪಣ್ಣ ಸೂಟೆ ತಕ್ಕಂಡ್ ಹೋದಂವ ಅದರ ಕೆಡ್ಸಿ, ಸೀದಾ ಓಡಿಕಂಡ್ ಬಂದ್ ಅಡ್ಗೆ ಕೋಣೆ ಒಳಗೇ ಹುಕ್ಕತ್. ಏನೋ ನೋಡಿ ಹೆದರ್‌ದವನಾಂಗೆ ದೆರ್‌ಪಿದೆ. ಮೋರೆ ತುಂಬಾ ಬೆಗರ್ ಅರ್ದದೆ. ಎಂತ ಕೇಪಣ್ಣಂತ ಎಲ್ಲವೂ ಗಾಬರಿಲಿ ಕೇಳ್ದೊ. ಎಂತಂತ ಹೇಳ್ದ್ ರಾಮಣ್ಣ – ಈ ರೊಟ್ಟಿ ಕುಕ್ಕೆನಾಂಗೆ .ನಾ ಆ ಕೋಳಿಗೈಪುನ ಅಳೆಗೆ ಇದ್ದಾಂಗೆ ಹುಲಿ. ಒಂದು ಚೂರು ಹೆಚ್ಚ್ ಕಮ್ಮಿ ಆದರೂ, ನನ್ನ ಮೇಲೆ ಹಾರ್ತಿತ್. ನಾ ಕೂಡ್ಲೆ ಉಪಾಯ ಮಾಡಿ. ಸೂಟೆ ಕೆಡ್ಸಿ ಓಡಿ ಬಂದೆ. ಏನೋ ನಂಗೆ ಋಣ ಉಟ್ಟುಂತ ಅವನೇ ಹೇಳಿಕಾಂತ್. ರಾಮಣ್ಣಂಗೆ ಪರಿಸ್ಥಿತಿ ಅರ್ಥ ಆತ್. ಇಂವ ಕಳ್ಳ ಬಾಯಿ ಬುಟ್ಟ್ ಹೇಳ್ತ್. ಈ ರೊಟ್ಟಿ ಕುಕ್ಕೆನೂ, ಆ ಕೋಳಿಗೈಪು ಅಳೆಗೆನೂ. ಅಬ್ಬಾ ಇಂವ ಇಸಿಕಿಲೆ. ನನ್ನ ಹಠನ ಇಂವ ಮುರ್ತ್. ಇಂವ ಉಣದೆ ಹೋಕಿಲೆಂತ ಈ ಕಟ್ಟ್ ಕಥೆನ ರೆಡಿ ಮಾಡಿ ಅಡ್ಗೆ ಒಳಗೆ ಹುಕ್ಕಂವ ಇನ್ನೇನ್ ಮಾಡ್ದೆ. ಆತ್ ಮಾರಾಯ, ನೀ ಇಂದ್ ಹೋಬಡ. ಹೇಂಗೂ ನೆಂಟ್ರ್ ಒಳೊ. ನಾ; ನಿನ್ನ ಉಂಬಕೆ ಹೇಳದ್ ತಪ್ಪಾತ್. ಎಲ್ಲವೂ ಕುದ್ದ್ ಉಂಡ್ ಮತ್ತೆ ಮಲ್ಗೊಮ್ಮೊಂತ ಹೇಳ್ದೊ. ಇಂವ ಮೀಸೆ ಅಡಿಂದ ಚೂರು ನೆಗಾಡಿಕಂಡ್ ಅಂತೂ ನಂಗೆ ಈ ಭೂಮಿ ಮೇಲೆ ಬೊದ್ಕುವ ಋಣನೂ, ನಿಮ್ಮಲ್ಲಿ ಉಂಬ ಋಣನೂ ಇತ್ತ್ ಕಂಡದೆಂತ ಹೇಳಿ ಎಲ್ಲವೂ ಕುದ್ದ್ ಉಂಡೊ. ಅಂತೂ ಕೇಪಣ್ಣನ ಖಾಲಿ ಹೊಟ್ಟೆಲಿ ಕಳ್ಸಿಕೆ ಆತ್ಲೆ. ನೀವೂನು ಬೇಗ–ಬೇಗ ಉಂಡ್‌ಕಣಿ ಕೇಪಣ್ಣ ಬಾದು.

****

# 4. ಅಜ್ಜಿ-ಪಿಳ್ಳಿ



'ಅಜ್ಜಿ ಸಾಂಕಿದ ಪಿಳ್ಳಿ ಬೊಜ್ಜಕ್ಕೂ ಆಕಿಲೆ'. ತೇಳುವ ಗಾದೆ ನಾವ್ಗೆಲ್ಲಾ ಗೊತ್ತುಟ್ಟು. ಹೀಂಗೆ ಒಂದು ಊರ್ಲಿ ಒಂದು ಅಜ್ಜಿನೂ-ಪಿಳ್ಳಿನೂ ವಾಸ ಇದ್ದೊ. ಅಜ್ಜಿಗೆ ಪಿಳ್ಳಿ ಬುಟ್ಟರೆ ಮತ್ತೆ ಯಾರ್ ಗತಿ ಇಲ್ಲೆ. ಪಿಳ್ಳಿಗೆ ಅಜ್ಜಿ ಒಬ್ಬನೇ ಆಶ್ರಯ. ಪಿಳ್ಳಿನ ಅಯ್ಯೆ-ಅಪ್ಪ ಸಣ್ಣದರ್ಲೇ ಎಂತದೋ ಒಂದು ದೊಡ್ಡ ರೋಗ ಬಂದ್ ಸತ್ತ್ ಹೋಗೋಳೊ. ಅಂದ್‌ಂದ ಪಿಳ್ಳಿಗೆ ಅಜ್ಜಿನೇ ಅಯ್ಯೆ-ಅಪ್ಪ ಎಲ್ಲವು. ಅಜ್ಜಿಗೆ ಈ ಪಿಳ್ಳಿನ ಅದೃಷ್ಟ ಕಂಡ್ ಬಾರೀ ಬೇಜಾರಾಗಿ, ಪಿಳ್ಳಿ ಹೇಳ್ದಾಂಗೆ ಕೇಳ್ತ್. ಪಾಪ ಅಯ್ಯೆ-ಅಪ್ಪ ಇಲ್ಲದ ತಬ್ಬುಲಿ ಕೂಸುಂತ ಒಲೆ ಬುಡಲೇ ಕುದ್ದ್‌ರ್ಸಿಕಂಡ್ ಉಂಬಕೆ-ತಿಂಬಕೆ ಕೊಡ್ತಿತ್. ಎಲ್ಲಿನೂ ಹೊರಗೆ ಹೋಕ್ಯಾಗಲೀ, ಜನಗಳೊಟ್ಟಿಗೆ ಬೆರೆಕಾಗಲೀ ಬುಡ್ತಿತ್ತ್‌ಲೆ. ಹೇಂಗೂ ಈ ಪಿಳ್ಳಿ ಒಂದು ಮೃಗದಾಂಗೆ ಬೆಳ್ತ್. ಅತ್ತ ಶಾಲೆಗೂ ಹೋಗದೆ. ಇತ್ತ ಕೆಲ್ಸನೂ ಮಾಡದೆ ಸೋಮಾರಿ ಆಗಿ ಹೋತ್. ಒಟ್ಟು ಪಿಳ್ಳಿ ಒಂದು ತರ ಬುದ್ಧಿಮಾಂಧ್ಯದವರಾಂಗೆ ಬೆಳ್ತ್. ಹಳ್ಳಿಲಿ ಕರೆವಾಂಗೆ ಇವನ ಒಬ್ಬ ಹೆಡ್ಡ ಧೂಮಾಂತ ಹೇಳಕ್.

ಹೀಂಗೆ ಒಂದ್ ದಿನ ಅಜ್ಜಿ ಪ್ರಾಯ ಆಗೀ ಮುದಿಗಟ್ಟಿ ಸತ್ತೇ ಹೋತ್. ಈ ಪಿಳ್ಳಿ ಯಾರೊಟ್ಟಿಗಾರ್ ಹೋಗಿ ಹೇಳ್‌ಮೊಂತೇಳಿರೆ ಯಾರ ಪರಿಚಯ ಇವಂಗೆ ಇಲ್ಲೆ. ಏನ್ ಮಾಡ್ದು.? ಸತ್ತವರ ಸುಡ್ದುಂತ ಅಜ್ಜಿ; ಯಾರೋ ಸತ್ತ ಸಮಯಲಿ ಹೇಳ್ದ ನೆಂಪು. ಹಾಂಗಾಗಿ ಪಿಳ್ಳಿ ಒಬ್ಬನೇ ಹೋಗಿ ಕತ್ತಿ-ಕೊಡ್ಲಿಂತ ಹಳಿ ಸೌಧೆ ಎಲ್ಲ ತಯಾರ್ ಮಾಡ್ತ್. ಅವಂಗೆ ಗೊತ್ತಿದ್ದಾಂಗೆ ಅದರ ಒಟ್ಟಾಕಿ ಕಿಚ್ಚಿ ಹಾಕಿಕೆಂತ. ಹನಿಸ್ ಮಡ್ಲ್‌ನೂ ತಕ್ಕಂಡೋಗಿ ಇಸಿತ್. ಇನ್ನ್ ಅಜ್ಜಿನ ತರಕಲ್ಲಾಂತ ಮನೆ ಕಡೆ ಹೋತ್. ಅಜ್ಜಿ ಒಂದು ಒಲಿ ಮೊಂದ್ರಿಲಿ ಮಲ್ಗಿದಲ್ಲೇ ಪ್ರಾಣ ಬುಟ್ಟುಟು. ಪಿಳ್ಳಿ ಅಜ್ಜಿನ ಹಾಂಗೆ ಸುಂಪೆ ಸುತ್ತಿದಾಂಗೆ ಮೊಂದ್ರಿಲಿ ಸುತ್ತಿತ್. ಹೊರಿಕೆ ಬೇರೆ ಯಾರೂ ಇಲ್ಲದರ್‌ಂದ ಅಜ್ಜಿನ ನೇಚಿ ಹೆಗಲ್ ಮೇಲೆ

ಸೌಧೆ ಹೊತ್ತಾಂಗೆ ಹೊತ್ತತ್. ಹೊತ್ತ್‌ಕಂಡ್ ಸೀದಾ, ಬಲ್ಲೆ ಹುಕ್ಕಂಡ್ ಅಂವ ಸೌದೆ ಒಟ್ಟಿದಲ್ಲಿಗೆ ತಕ್ಕಂಡ್ ಬಾತ್. ಬಂದ್ ಮೊಂದ್ರಿ ಬಿಚ್ಚಿ ನೋಡಿರೆ ಅಜ್ಜಿನ ಹೆಣ ಕಾಂಬೊದಿಲ್ಲೆ. ಎಲಾ... ಅಜ್ಜಿ ಎತ್ತ ಹೋತ್‌ಂತ ಯೋಚನೆ ಮಾಡ್ತ್. ಅಜ್ಜಿ ಬಾರಿ ಹುಷಾರ್ ಉಟ್ಟು. ನೋಡ್ದಾಂಗೆ ಅಲ್ಲಂತ ವಾಪಾಸ್ ಹುಡ್ಕೆಂಡ್ ಬಾತ್. ಬಾಕನ ಈ ಪಿಳ್ಳೆಗೆ ಬಂದ ದಾರಿ ಗೊತ್ತಾಗದೆ ಬೇರೆ ದಾರಿಲಿ ಬಾತ್. ಹಾಂಗೆ ಬಾಕನ ಅಜ್ಜಿ ಸೆರ್‌ಂಗ್‌ನ ತಲೆಗೆ ಹಾಕಂಡ್ ಚೆಗ್ತೆ ಚೆಗ್‌ರ್‌ನ ಜಿಂಟುತ್ತಾ ಉಟ್ಟು. ಓ  ನೀ ಇಲ್ಲಿ ಒಳನಾಂತ ಒಂದು ಸೌಧೆ ಕೊಳ್ಳಿ ತೆಗ್ದ್ ಅಜ್ಜಿನ ತಲೆಗೆ ಹೊಡ್ತ್. ನಾ ಎಲ್ಲಾ ರೆಡಿ ಮಾಡಿಕಾಕನ ನೀ ತಪ್ಪಿಸಿಕಂಡಳ; ನಂಗೆ ಎಷ್ಟ್ ಕಷ್ಟ ಆತ್ತ್‌ಂತ ನಿಂಗೆ ಗೊತ್ತುಟಾಂತ ಪರ್ಚಿಕಂಡ್ ಹೊತ್ತ್ ತಂದ್ ಸೌಧೆ ಅಟ್ಟಿ ಮೇಲೆ ಮಲ್ಗಿಸಿ ಕಿಚ್ಚ್ ಕೊಟ್ಟತ್. ಕಿಚ್ಚಿ ಕೊಟ್ಟು ಆದ ಮೇಲೆ ಮನೆಗೆ ಪೋಯಿಂತ ಬಾಕನ ದಾರಿಲಿ ಅಜ್ಜಿನ ಹೆಣ ಬಿದ್ದ್‌ಕಂಡ್ ಉಟ್ಟು. ಈ ಸರ್ತಿ ಪಿಳ್ಳೆ ಶುರು ಹೊತ್ತ್‌ಕಂಡ್ ಹೋದ ದಾರೀಲೇ ವಾಪಾಸ್ಸ್ ಬಂದುಟ್ಟು. ಅರೆ ಈ ಅಜ್ಜಿ ಯಾರ್? ಮತ್ತೆ ನಾ ಹೊಡ್ದ್ ಸುಟ್ಟ ಅಜ್ಜಿ ಯಾರ್? ಇವಂಗೆ ತಲೆ ಬಿಸಿ ಆಕೆ ಶುರು ಆತ್. ಇದ್ ಅಜ್ಜಿನ ದೆವ್ವಮೊನಿ ಆಗಿರ್‍ಕೊಂತ ಹೆದ್ರಿಕೆನೂ ಆತ್. ಧೈರ್ಯಲಿ, ಒಂದು ದೊಣ್ಣೆಲಿ ಅಜ್ಜಿನ ಮೊಗ್ಚಿ ಹಾಕಿತ್. ಆಗ ಅಜ್ಜಿನ ಮೋರೆ ಸರಿ ಕಂಡತ್. ಓ ನನ್ನ ನಿಜವಾದ ಅಜ್ಜಿ ಇಲ್ಲಿ ಬಿದ್ದುಟ್ಟು. ಪಾಪ ಯಾವುದೋ ಅಜ್ಜಿನ ನನ್ನ ಅಜ್ಜಿಂತ ಹೊಡ್ದ್ ಕೊಂದೆ ಅಂತ ನಿಧಾನಕ್ಕೆ ಅರ್ಥ ಆಕೆ ಸುರು ಆತ್. ಇನ್ನ್ ಯೋಚಿಸಿ ಫಲ ಇಲ್ಲೆಂತ ಆ ಅಜ್ಜಿನ ಹೆಣನೂ ಹೊತ್ತ್‌ಕಂಡ್ ಹೋಗಿ ಹೊತ್ತುತಿದ್ದ ಕಾಟಕ್ಕೆ ಹಾಕಿತ್. ಅಂತೂ ಇಂತೂ ಬೋದಾಳ ಪಿಳ್ಳೆ ಎರಡ್ ಅಜ್ಜಿಕಳ ಒಟ್ಟಿಗೆ ಹೊತ್ತಿಸಿತ್.

****

# 5. ಮಾಡುಕೋಲು



'ಮಾಡುಕೋಲು' ಈ ಹೆಸ್‌ರ್‌ನ ಹೇಳಿರೆ ಈಗನ ಮಕ್ಕಳಿಗೆ ಎಂತಂತ ಗೊತ್ತಾಕ್ಕಿಲ್ಲೆ. ಆದ್ರೆ 50 ವರ್ಷ ದಾಟಿದೊವುಕೆ ಸಾಧಾರಣ ಹಳ್ಳಿಲಿ ಬೊದ್ಕಿದೊವುಕೆ ಎಲ್ಲವುಕ್ಕೂ ಗೊತ್ತಿರ್ದು. ಕೆಲವು ಜನಂಗ ಮಾಡುಕೋಲುಲಿ ಕುದ್ದ್ ಕುಮೇರಿ ಪಾರ ಮಾಡ್ದ ಅಭ್ಯಾಸ ಇರೋವು ಇರುವೊ. ಇನ್ನ್ ಪೇಟೇಲೇ ಬೆಳ್ದ್‌ವುಕೆ ಹೆಸರ್ ಕೇಳಿಯಾರ್ ಗೊತ್ತಿರ್ದು.

ಮುಂದೆನ ಕಾಲಲಿತೇಳಿರೆ ಒಂದು 50–60 ವರ್ಷಗಳ ಹಿಂದೆ ಎಲ್ಲವೂ ಬೇಸಾಯ ಮಾಡಿಕಂಡಿದ್ದ ಕಾಲ. ಈಗನಾಂಗೆ ದುಡ್ಡುನ ಬೆಳೆಗಳಾದ ಅಡ್ಕೆ, ರಬ್ಬರ್, ಕಾಯಿ, ಗೇರ್ದಣ್, ಒಳ್ಳೆ ಮೆಣ್ಸ್ ಇದರೆಲ್ಲ ಬಾರೀ ಬೆಳ್ಸ್‌ತ್ತಿತ್ತ್‌ಲೆ. ಕಾಯಿ ಗೈಪಿಗೆ ತಕ್ಕ , ಗದ್ದೆ ಕಟ್ಟಪುಣಿಗಳ್ಲಿ ಬೆಳ್ಸುತ್ತಿದ್ದೊ. ಗೇರ್ದಣ್ಣ್ ಮಾತ್ರ ಕಾಡ್ ಕೊಚ್ಚಿಗಳ್ಲಿ ಇರ್ತಿತ್ತ್. ರಬ್ಬರ್ ಬೆಳೆನ ಮಾತ್ರ ಕೇರಳಲಿ ಚೇಟಂಗ ಮಾಡ್ತಿದ್ದದರ ಕೇಳಿ ಗೊತ್ತುಟ್ಟು ಅಷ್ಟೆ. ಆದ್ರೆ ಈಗ ನೋಡಿ ಕಾಲ ಕೆಟ್ಟ್ ಹೋತಾಂತ ಪ್ರಾಯದೊವು ಹೇಳ್ದು ಅದನೇ. ಗದ್ದೆಲೆಲ್ಲಾ ಅಡ್ಕೆ ಬೆಳ್ಸಿದೊ. ಗುಡ್ಡೆ, ಕಾಡ್‌ಗಳ ಕಡ್ದ್ ರಬ್ಬರ್ ಹಾಕಿದೊ. ದನ–ಕರ್‌ಗಳ ಸಾಂಕುದುಲೆ. ಸೊಪ್ಪು–ಸೌಧೆಗೆ ಜಾಗೆ ಇಲ್ಲೆ. ಹೀಂಗೆ ಕಾಲ ಬದಲಾಗುಟು.

ಓ ನಾ ಮುಂದೆನ ಕಾಲದ ಕಥೆನ ಹೇಳಿಕೆ ಹೊರ್ಟದ್. ಆ ಕಾಲಲಿ ಗದ್ದೆ ಬೇಸಾಯ ಮಾಡಿಕಂಡ್ ಇದ್ದೊ. ಅದೂ ಸಾಲುದುಲೆಂತ ಗುಡ್ಡೆ–ಕಾಡ್‌ಗಳ ಕಡ್ದ್, ಕಾಡಿಗೆ ಕಿಚ್ಚಿ ಹಾಕಿ ಕುಮೇರಿ ಮಾಡ್ತಿದ್ದೊ. ಕುಮೇರಿ ತೇಳಿರೆ ಅದೇ ಕಾಡ್ ಕಡ್ದ್ ಕಿಚ್ಚಿ ಹಾಕಿರೆ ಇಡೀ ಬೊಳ್ಯಡೆ ಆದು; ಅದೇ ಕುಮೇರಿ. ಇಂತ ಕುಮೇರಿನ; ಗದ್ದೆ ಹೂಡಿ ನೇಗ್‌ಲ್ ಹಳ್ತ್ ಆದ ಮೇಲೆ. ಅದ್ಕೆ ಪೊಣ್ಮೊಳುಂತ ಕಬ್ಬಿಣದ ಪಟ್ಟಿನ ಹೊಡಿತಾ ಇದ್ದೊ. ಅದ್ ಗದ್ದೆ ಹೂಡಿಕಾಕನ ನೆಲನ ಪರ್ಡಿ ಮೊಣ್ಣು ಎಬ್ಬಿಸಿತಿತ್. ಅಂಥ ಹಳೇ ಪೊಣ್ಮುಳುಗಳ ಒಂದು–ಎರಡ್ ಬೆದ್ರ್‌ಗಂಟ ಇರುವ ದೊಣ್ಣೆನಾಂಗಿದ್ದದೆ. ಅದರ ತಕ್ಕಂಡ್ ಅದರ ಕೊಡಿನ ಓರೆ

ಒಟ್ಟೆ ಮಾಡಿ ಅದ್ಕೆ ಹೊಗ್ಗಿಸಿ, ಈ ಕಾಡ್ ಕಿಚ್ಚಿ ಹಾಕಿದ 'ಕುಮೇರಿ' ತೇಳ್ದರ ಪರ್ಡ್ತಿದ್ದೊ. ಹೀಂಗೆ ತುಂಬಾ ಜನ ಸೇರಿ ಪರ್ಡಿದಲ್ಲಿ ಭತ್ತ ಬಿತ್ತುತಿದ್ದೊ. ಮಳೆ ಬಿದ್ದ ಕೂಡ್ಲೆ ಈ ಕುಮೇರಿ ಬಿತ್ತಿದ್ದ್ ಚಿಗ್‌ರಿ ಪೈರ್ ಆತೀತ್. ಹೊತ್ತಿಸಿದ ಕರಿ ಮೊಣ್ಣ್‌ಲಿ ಬಾರೀ ಲ್ಯಾಕ್ ಎದ್ರ್‌ತ್ತಿತ್ತ್. ಕೆಲವು ಜನ ಹಳ ಭತ್ತ, ಹಳ ರಾಗಿ, ಇನ್ನ್ ನವಣೆ, ಕಡ್ಡಿ ಎಳ್‌ಸಂಡೆ ಹೀಂಗೆ ಬೇರೆ ಬೇರೆ ಬಿತ್ತಿ ಬೆಳ್ಸ್‌ತ್ತಿದ್ದೊ. ಕುಂಬು ಮರಗ ಇದ್ದಲ್ಲಿ ಅದರ ಸುಟ್ಟ್‌ದ್ ತುಂಬ ಬೂದಿ ಎಲ್ಲ ಇರ್ತಿದ್ದ ಜಾಗೆಗೆ [ಅದರ ಚೂಟು ಮಣ್ಣುಂತ ಕರೆದು] ಅಂತದರ್ಲಿ ಕೆಲವು ಜನ ನೀರ್‌ಸೊಂತೆ, ಉದ್ದ ಎಳ್‌ಸಂಡೆ ಮತ್ತೆ ಹೀರೆಕಾಯಿನೂ ಬೆಳ್ಸ್‌ತ್ತಿದ್ದೊ. ಇಷ್ಟೆಲ್ಲ ಕೃಷಿ ಕಾಡ್ ಗುಡ್ಡೇಲಿ ಮಾಡಿಕನ ಅದ್ಕೆ ಕಾಡ್ ಪ್ರಾಣಿಗನೂ ಬಾತಿದ್ದೊ. ಕಾಡ್ ಹಂದಿಗ, ಹೆಗ್ಗಣ್ಣಂಗ, ಎಲಿಗ, ಕುರೆಗ, ಇನ್ನ್ ಗುರ್‌ಬಿತ ಹಕ್ಕಿಗ, ಕೊಂಗ್ರ್‌ಗ ಹೀಂಗೆ ಬೇರೆ ಬೇರೆ ಮೃಗ ಪಕ್ಷಿಗಳೂ ಬಾತಿದ್ದೊ. ಅದರೊಟ್ಟಿಗೆ ಊರ್‌ನ ಉರ್‌ಕೊಳ್ಳಿ ದನಂಗಳ ಉಪದ್ರನೂ ಕಡಿಮೆ ಇತ್ಲೆ. ಹಾಂಗಾಗಿ ಬಿತ್ತಿ ಬೆಳ್ದ ಬೆಳೆನ ಉಳ್ಸಿಕಾಂಕೆ ಇಂತಹ ಕುಮೇರಿಗಳ್ಲಿ ಸಣ್ಣ–ಸಣ್ಣ ಮನೆಗಳಾಂಗೆ ಕಟ್ಟ್‌ತಿದ್ದೊ. ಅದ್ಕನೇ 'ಮಾಡುಕೋಲು'ಂತ ಹೆಸ್ರ್. ಇದ್ ಮಾಡುಕೋಲುಂತೇಳಿರೆ ಅಡಿಲಿ ಕಂಬ ಹಾಕಿ ಕಟ್ಟಿರೂನೂ, ಅದರ್ಲಿ ಕುದ್ರಿಕೆ ಬಾರಿ ಎತ್ತರಲಿ 'ಕಟ್ಲ್' ಮಾಡ್ತಿದ್ದೊ. ಕಟ್ಲಾಂತೇಳಿರೆ ಸುಮಾರ್ ಒಂದು–ಒಂದೂವರೆ ಆಳ್ ಎತ್ತರಲ್ಲಿ ಬೆದ್‌ರ್‌ನ ಒಟ್ಟೆ ತೆಗ್ದ್, ಕಟ್ಟಿ ಅದ್ಕೆ 'ಚೆದ್ದಲೆ' [ಬೆದ್‌ರ್‌ನ ಕತ್ತಿಲಿ ಹಕ್ಕಲೆ ಹಕ್ಕಲೆ ಕೊಡ್ಡಿರೆ ಅದ್ ಒಂದು ಭಾಗ ಬುಡ್ಸಿರೆ ಒಳ್ಳ ಹಲಗೆನಾಂಗೆ ಆದೆ] ನ ಹಾಕಿ ಮಲ್ಗಿಕ್ಕೂ, ಕುದ್ರಿಕ್ಕೂ ಮಾಡ್ತಿದ್ದೊ. 'ಅಟ್ಟೋಳಿಕೆ'ಂತಲೂ ಕರ್ದವೆ. ಇದರ ಅಡಿಲಿ ದೊಡ್ಡ–ದೊಡ್ಡ ಮರದ ಕುಂಟೆಗಳ ತಂದ್ ಹಾಕಿ ಕಿಚ್ಚಿ ಹಾಕ್‌ತ್ತಿದ್ದೊ. ಇದರ್‌ಂದಾಗಿ ಮೇಲೆ ಮಲ್ಗಿಕೆ ಎಂತ ಚಳಿ–ಗಾಳಿ ಬಂದರೂ ಕ್ಯಾರೇ ಇಲ್ಲೆ. ಕಾಡ್ ಪ್ರಾಣಿಗಳಿಗೂ ಈ ಕಿಚ್ಚಿ ಹೊತ್ತುದರ ನೋಡಿರೆ ಹಕ್ಕಲೆ ಬಾಕೆ ಧೈರ್ಯ ಬಾಕಿಲೆ. ಬೇಕರೆ ಅಲ್ಲೆ ಚಾ ಇಸಿ ಕುಡ್ಕಂಡ್, ಹಲ್ಸಿನಕ್ಕಿ ಬೀಜನ ಹೊರ್ಕಂಡ್ ಮುಂದೆನ ಅಜ್ಜಂದರ್ ಕುಮೇರಿ ಪಾರ ಮಾಡುವೊ. ಹಗ್‌ಲ್ ಹೊತ್ತಾದರೆ ಅಂಡಟೆ [ಎರಡ್ ಗಂಟ್ ಬೆದರ್ ತುಂಡುನ ನೊಡುಲಿ ಸಪೂರಲಿ ಒಂದು ತುಂಡು ತೆಗ್ದ್, ಆತಲೆ, ಈ ತಲೇಲಿ ಬೆರ್ಲ್ ಉದ್ದ ತುಂಡು ಮಾಡಿ, ಅದರ ಸೈಡ್‌ಗೆ ಕೋಲುಲಿ ಹೊಡ್ದರೆ ಒಳ್ಳ ಚೆಂಡೆ ಹೊಡ್ದಾಂಗೆ ಶಬ್ದ ಬಾದು] ಹೊಡ್ಕಂಡ್ ಬೊಬ್ಬೆ ಹೊಡ್ದರೆ ಎಂತಹ ಹಕ್ಕಿಗಳೂ, ಕುರೆಗಳೂ ಬಾಕಿಲೆ. ಕತ್ತಲೆಗೆ ಕುಮೇರಿಲಿ ಮಲ್ಗೊವು ಮನೆಂದ ಬೆಡಿ [ಕೋವಿ]ನೂ ಲೈಟ್‌ನೂ ತಕ್ಕಂಡ್ ಹೋವೊ. ನಡುಇರ್ಲ್ ಕಳ್ದ ಮೇಲೆ, ತಲೆಗೆ ಲೈಟ್ ಕಟ್ಟಿ ಕುಮೇರಿಗೆ ಒಂದು ಸುತ್ತು ಬಂದರೆ, ಬರಿಕನೋ, ಕೆಂಪನೋ, ಇಲ್ಲರೆ ಕಾಡ್ ಹಂದಿನೋ ಹೊಡ್ದದ್ ಎಷ್ಟೋ ಉಟ್ಟು.

ಹೀಂಗೆ ಮಾಡುಕೋಲುಲಿ ಒಬ್ಬ ಅಜ್ಜ ಒಮ್ಮೆ ಕುದ್ದ್‌ಕಂಡ್ ಅಂಡಟೆ ಹೊಡ್ಕೊಂಡ್, ಹಿಡ್ಯೋ .. ಉಚ್ಚೋಂತ ಬೊಬ್ಬೆ ಹೊಡ್ಕಂಡ್, ಕುದ್ದ್‌ಕಂಡ್ ಇದ್ದೊಗಡ. ಈ ಅಂಡಟೆ ಶಬ್ದಕ್ಕೆ, ಕುರೆಗ, ಕಾಡ್ ಪ್ರಾಣಿಗ ಚೂರು

ಹೆದ್ರ್‌ತ್ತಿದ್ದೊ. ಆದರೆ ಊರ್‌ನ ಉರ್‌ಕೊಳ್ಳಿ ದನಗಳಿಗೆ ಇದ್ ಲೆಕ್ಕಕೇ ಇಲ್ಲೆ. ಈ ಅಜ್ಜ ತೇಳಿರೆ ಹೆಚ್ಚ್ ಕಮ್ಮಿ 6–7 ಅಡಿ ಎತ್ತರದ ದೊಡ್ಡ ಅಜ್ಜ. ಎಲ್ಲಿ ಹೋದರೂ ಕಾಲ್ ಮೇಲೆ ಕಾಲ್ ಹಾಕಿ ಕುದ್ರುವ ಅಭ್ಯಾಸ. ಅದ್ ಬರೀ ಕಾಲ್ ಮೇಲೆ ಕಾಲಲ್ಲ. ಕಾಲ್‌ನ ಕಾಲ್ ಮೇಲೆ ಹಾಕಿ. ಪಾದದ ಕೊಡಿನ ಇನ್ನೊಂದು ಕಾಲ್ ಹಿಂದೆ ತಂದ್ ಒಂದು ಸುತ್ತ್ ಹಾಕಿ ಕುದ್ರುವ ಅಭ್ಯಾಸ. ಅಜ್ಜ ಮಾಡ್‌ಕೋಲುನ ಕೊಡಿಲಿ, ಒಂದು ಗೋಣಿ ಚೆಲ್ಲ್ ಹಾಕಿ ಅದರ ಮೇಲೆ ಕುದ್ದ್‌ಕಂಡ್ ಅಂಡಟೆ ಹೊಡ್ಕಂಡ್ ಬೊಬ್ಬೆ ಹಾಕಂಡ್ ಒಳಗಡ. ಈ ಅಜ್ಜನ ಅಣ್ಣನ ಮಜ ಕಿಚ್ಚಿನ ಪೆಟ್ಟಿಗೆ ಇಲ್ಲೆಂತ ಅಂಗಡಿಗೆ ಹೋಗಿ ತಿರ್‍ಗಿ ಬಾಕನ; ಕೆಳಗೆನ ಬೇಲಿ ಕರೇಲಿ ಎರ್‍ಡ್ ದನಗ ಡಮ್ಮ್ ಕಟ್ಟಿ ಕೈಯಿ ತಿಂತಾ ಒಳೊ. ಇಂವ ಅಜ್ಜನ 'ಸಣ್ಣಪ . ಓ ಸಣಪಾಂತ ಕರ್‍ತ್. ಅಜ್ಜನ ಅಂಡಟೆ ಶಬ್ದಂದಾಗಿ ಕೇಳ್ತೇಲೆ. ಒಮ್ಮೆ ಎಲ್ಯಾಡಿಕೆ ಮಡೆ ಉಗ್ಯಕೆಂತ ಬೊಗ್ಗಿ, ಬಾಯಿಗೆ ಎರಡ್ ಚೆರ್‍ಲ್‌ನ ಅಡ್ಡ ಇಸಿ 'ಪುಚಕ್'ಂತ ಉಗ್ಯಾಕಾಕನ ಅಂಡಟೆ ನಿಲ್ಸಿದೊ. ಇಂವ ಡಮ್ಮ್ ಕಟ್ಟಿ ಸಣಪ . ಸಣಪಾಂತ ಕರಿತನೇ ಇತ್ತ್. ಅಜ್ಜಂಗೆ ಓ ಸಣಪಾಂತ ಯಾರೋ ಕರ್‍ದಾಂಗೆ ಕೇಳ್ತ್. ಓ .. ಯಾರಣ್ಣ . ಎಂತಾಂತ್‌ಂತ ಅಜ್ಜ ಕೇಳ್ದೊ. ನಿಮ್ಮ ಕುಮೇರಿನ ಇಲ್ಲಿ . ಮೂರು . ನಾಲ್ಕ್ ದನಗ ತಿಂಬೊತ ಒಳೊಂ ..ತ ಜೋರುಲಿ ಹೇಳ್ತ್. ಓ . ಹೌದಾ ..ಂತ ಅಜ್ಜ ಒಮ್ಮೆಲೆ ಕುದ್ದಲಿಂದ ಎದ್ದೊ. ಎದ್ರುವ ಪೋರ್‍ಸಿಗೆ ಈ ಕಾಲ್ ಸುತ್ತಿಕಂಡ್ ಇದ್ದದ್ ಹಾಂಗೆ ಇತ್ತ್. ಅಜ್ಜ ಮರ ಕಡ್ದ್ ಹಾಕಿದವರಾಂಗೆ ಮಾಡುಕೋಲುಂದ ಒಂದು–ಒಂದುವರೆ ಆಳೆತ್ತರಂದ ಕೆಳಗೆ ಕಂಕಣಿ ಬಿದ್ದೇ, .. ಓ ರಾಮ. ರಾಮ. ಅಜ್ಜ ಸತ್ತೇ ಹೋದಲ್ಲಾಂತ ಇಂವ ಮಾಡುಕೋಲು ಕಡೆಗೆ ಓಡ್ತ್. ನೋಡಿರೆ ಅಜ್ಜನ ಮೂಂಕು–ಮುಸುಂಡು ಎಲ್ಲಾ ಎಸಂಡ್ ಗುದ್ದಿದಾಂಗೆ ಆಗುಟು. ಈ ಎಲ್ಯಾಡಿಕೆ ಮಡೆನೂ, ಹಂಞ ರಕ್ತನೂ ಸುರ್‌ದರ್‌ಂದ ಅಜ್ಜನ ಮೋರೆ ಒಳ್ಳ ಜಾಜಿಕಾಯಿ ತಿಕ್ಕಿದ ಕುರೆನಾಂಗೆ ಕಂಡದೆ. ಎಂತಾತ್ ಸಣಪ್ಪಂತ ಕೇಳಿರೆ, ನಿನ್ನ ಗುಂಡಿ ಕಡೆದು. ಆ ಹುಲಿ ತಿಂಬ ದನಗಳಂದಾಗಿ ನೀ ನನ್ನ ಕೊಲ್ಲುತ್ತಿದ್ದ. ಬಾಯಿಲಿ ಇದ್ದ ನಾಲ್ಕ್ ಹಲ್ಲುನೂ ಉದ್‌ರ್‌ತ್ ಕಂಡಂದೆ. ಅಲ್ಲ ವುಗ್ಗಪ್ಪ ಕೈ ತಿಂಬಕನ ಹಾಂಗೆ ಹೋದು ಹೇಂಗೇಂತ ಕರ್‍ದದ್. ಅದು ತಪ್ಪಾ? ಅದು ತಪ್ಪಲ್ಲ ಮಾರಾಯ, ಈ ಕಾಲ್ ಸುತ್ತಿ ಕುದ್ರುವ ಅಭ್ಯಾಸಂದಾಗಿ ಸಡನ್ನೇ ಬಿಚ್ಚಿಕೆನೇ ಮರ್‍ತ್ ಹೋತ್. ನೀ ಕರೆವ ಬರಲಿ ಹಾಂಗೆ ಎದ್ದೆ. ತಪ್ಪು ನನ್ನ್‌ಂದೆಂತ ಹೇಳಿ, ನೀ ಒಬ್ಬ ತಲೆ ಹೋಕ, ಜುವ ಹೋತಾಂತ ಹಾಂಗೆ ಕರ್‍ದದ್‌ಂತ, ಕರ್‍ದವಂಗೇ ಬೊಯ್ಕಣ್ ಅಜ್ಜ ಮೆಲ್ಲ ಎದ್ದೊ.

****

# 6. ಚೀಪೆ ಪೇರ್



ಒಂದು ಊರ್ಲಿ ಒಂದ್ ಲಾಯಿಕ್‌ನ ಹಳ್ಳಿ ಇತ್ತ್ ಗಡ. ಅಲ್ಲಿ ಹಕ್ಕ ಪಕ್ಕಲೆ ಮನೆ ಆಗಿ ತುಂಬಾ ಜನ ಕೂಡಾಡಿಕಂಡ್–ಓಡಾಡಿಕಂಡ್ ಇದ್ದ ಜಾಗೆ. ಹಳ್ಳಿ ಆದ ಕಾರಣ ಗದ್ದೆ ಬೇಸಾಯ ಎಲ್ಲ ಮಾಡಿಕಂಡ್ ಹಿಂಬಾತ್ತಾಕನ ಗದ್ದೆನ ಕಟ್ಟ ಪುಣಿಲಿ, ಇಲ್ಲರೆ ಮಜಲ್‌ಗದ್ದೆ ಪುಣಿಲಿ ಮಕ್ಕ ಆಟ ಆಡಿಕಂಡ್, ಹೈದಂಗ ಎನಾರ್ ಹರಟೆ ಹೊಡ್ಕಂಡ್ ಯಾರ್‍ಯಾರ ಗೂಡೆಗಳ. ಹೈದಂಗಳ ವಿಷಯ ಮಾತಾಡಿಕಂಡ್ ಇರ್ತಿದ್ದೊ. ಹಳೆ ಪ್ರಾಯದೊವು ಕೂಡಾ ಹಿಂಬೊತ್ತಾಕನ ಹಕ್ಕಲೆ ಇದ್ದ ಒಂದು ಚದ್ದಲೆ ಅಂಗಡಿಗೆ ಬಂದ್ ಬೀಡಿನೋ, ಸಿಗರೇಟ್‌ನೋ ಎಳ್ಕಂಡ್ ಏನೋ ಸುಖ–ಕಷ್ಟಗಳ ಮಾತಾಡಿಕಂಡ್ ಇರ್ತಿದ್ದೊ.

ಹೆಚ್ಚ್ ಕಮ್ಮಿ 20–30 ಮನೆಗ ಇದ್ದೊ ಆ ಹಳ್ಳಿಲಿ. ಏನಿದ್ದರೂ ಒಂದ್ 10–20 ಹುಡ್ಗರ್‌ನೂ, ಒಂದು 15–20 ಗೂಡೆಗಳೂ ಇದ್ದ ಹಳ್ಳಿ ಅದ್. ಈ ಮನೆಗಳ್‌ಂದ ಸಾದರ್‌ಣ ಎಲ್ಲ ಹೈದಂಗಳೂ ಒಂದಲ್ಲ ಒಂದು ದಿನ ಹಿಂಬೊತ್ತಾಕನ ಒಂದ್ ಗದ್ದೆ ಪುಣಿಲಿ ಕುದ್ದ್‌ಕಂಡ್ ಎನಾರ್ ಮಾತಾಡ್ತ ಇದ್ದೊ. ಆದರೆ ಅವರ ಪೈಕಿ ಆ ಗುಡ್ಡಣ್ಣನ ಮಜ ಮಾತ್ರ ಬಾರಿ ಕಮ್ಮಿ ಬಾತಿದ್ದ್ ಮತ್ತೆ ಇವರೊಟ್ಟಿಗೆ ಸೇರ್ತಿದ್ದದ್ ಕೂಡಾ. ದಾರಿಲಿ ಏನಾರ್ ಹೋಕನ–ಬಾಕನ ಸಿಕ್ಕಿರೆ ಅಣ್ಣಾ ಎಲ್ಲಿಗೆ ಹೊರ್ಟದ್‌ಂತ ಕೇಳಿರೆ . ಗದ್ದೆ ಹಕ್ಕಲೆ . ಇಲ್ಲರೆ ಅಂಗಡಿ ಹಕ್ಕಲೆಂತ ಹೇಳಿಕಂಡೇ ಹೋದು. ನಿತ್ತ್ ಮಾತಾಡುವ ಕ್ರಮ ಇಲ್ಲೆ. ಅಂತವಂಗೆ ಅವನ ಮನೇವು ಒಂದು ಗೂಡೆ ನೋಡಿ ಮೊದುವೆ ಮಾಡುವೆ. ಅದ್ ಕೂಡಾ ಗೂಡೆನ ಮನೇಲೆ. ಮೊದ್ವೆ ಆದರ್‌ಂದ ಯಾರೂ ದೊಡ್ಡ ಹೋತ್‌ಲೆ. ಒಂದು ಐದಾರ್ ಅಜ್ಜಂದರ್, ಮತ್ತೆ ನಾಲ್ಕೈದು ಜನ ಅಜ್ಜಿಕ ಮತ್ತೆ ಊರುಗೌಡಂತ ನಡ್ಕಂಡ್ ದಿಬ್ಬಣ ಹೋಗಿ, ಅಲ್ಲೆ ಗೂಡೆನ ಮನೆಲಿ ಧಾರೆ ಮಾಡಿಕಂಡ್ ಅದೇ ದಿನ ಕತ್ತಲೆಗೆ ನಡ್ಕಂಡ್ ಗೂಡೆನ ಕರ್ಕಂಡ್ ಬಂದೊಳೊ. ಇಂವ ಯಾರೊಟ್ಟಿಗೂ ಮಾತಾಡದಂವ, ಹುಡ್ಗರೊಟ್ಟಿಗೆ ಹೇಳದರ್‌ಂದ ಯಾರೂ

ಹೈದಂಗ–ಗೂಡೆಗ ಅವನ ಮೊದ್ವೆಗೆ ಹೋತ್‌ಲೆ. ಗೂಡೆನ ಕರ್ಕಂಡ್ ಬಂದ ಪುಣ್ಯಾತ್ಮ ಅವನ ಹೆಣ್ಣ್‌ನ ಮನೆಲೇ ಕುದ್ರಿಸಿಟು. ಯಾರ ಮನೆಗೂ ಕಳ್ಸಿತ್ತಿಲೆ. ಅಜ್ಜಂದರ್‌ಗೆ ಬುಟ್ಟರೇ ಗೂಡೆ ಹೇಂಗುಟ್ಟುಂತ ಯಾರಿಗೂ ಗೊತ್ತ್‌ಲೆ. ಒಂದೆರಡ್ ಜನ ಅವರ ಮನೆ ಹಿರಿಯವರೊಟ್ಟಿಗೆ ಕೇಳಿ ತಿಳ್ಕಂಡ, ಗೂಡೆ ಹೇಂಗುಂಟ್ಟುಂತ. ಉಮ್ಮಣ್ಣ ನಾವು ಮೊದ್ವೆಗೆ ಹೋದ್; ಅಲ್ಲದೆ ಸರಿ ನೋಡಿಕೆ ಆತಿಲ್ಲೆ. ಅರ್ಧ ಈ ಗೂಡೆ ಮುಸುಕು ಬಟ್ಟೆ ಹಾಕಂಡ್ ಅಲ್ಲಿಂದ ಮರ್‍ಡಿಕೆ ಶುರು ಮಾಡ್ದ್, ಇಲ್ಲಿಗೆ ಮುಟ್ಟ. ಅಜ್ಜಿಕ ಒಂದಿಬೊರು ಸಮಧಾನ ಮಾಡಿಕಂಡ್ ಬಾತಿದೊಂತ ಹೇಳ್ದೊ.

ಹೀಂಗಿರಿಕನ ಹುಡ್ಗರೆಲ್ಲ್ ಸೇರಿ ಒಂದು ದಿನ ಚಾಳೆ ಕಟ್ಟಪುಣಿಲಿ ಮಾತಾಡ್ದೊ. ಎನಾರ್ ಮಾಡಿ ಗುಡ್ಡಣ್ಣನ ಮಜನ ಹೆಣ್ಣ್‌ನ ನೋಡೋಕು. ಎಂತ ಮಾಡ್ದೊಂತ ಉಪಾಯ ಹುಡ್ಕಿಕೆ ಶುರು ಮಾಡ್ದೊ. ಒಬ್ಬೊಬ್ಬನೇ ಅವನ ಮನೆಗೆ ಹೋಗಿ, ಏನಾರ್ ಕಾರಣ ಹೇಳಿ ಗೂಡೆನ ನೋಡಿಕೆ ಟ್ರೈ ಮಾಡ್ದೊ. ಊಹುಂ ಯಾರಿಗೂ ಗೂಡೆ ನೋಡಿಕೆ ಆತ್ಲೆ. ಎಂಥ ಕೇಳಿರೂ ಹುಡ್ಗನೇ ತಂದ್ ಕೊಟ್ಟ್ ಅವರ ಕಳ್ಸ್‌ತ್ತಿತ್ ಗಡ. ಅವರ ಪೈಕಿ ಕುಶಲ ಒಂದು ಚೂರು ಚುರ್ಕ. ಅಂವ ಈ ಹುಡ್ಗರೊಟ್ಟಿಗೆ ಹೇಳ್ತ್. ನೀವೆಲ್ಲ ಅಂವನ ಮನೆಗೆ ಹೋಗಿ ಗೂಡೆ ನೋಡಿಕೆ ಆಕಿಲ್ಲೆ.  ಯಾಕೆಂತೇಳಿರೆ ಮನೆಗೆ ಯಾರೂ ಹೋದರೂ ಆ ಗೂಡೆ ಹೊರಗೆ ಬಾದುಲೆಗಡ. ಬಂದವರೊಟ್ಟಿಗೆ ಇಂವನೆ ಬಂದ್ ಮಾತಾಡ್ಸಿದೆ ಗಡ. ಅಂದರೆ ಎಂತ ಮಾಡ್ದು. ಆಗ ಕುಶಲಂತೇಳ್ದಂವ ಹೇಳ್ತ್ ಗಡ, ನಾ ಅವನ ಮನೆಗೆ ಹೋಗಿ ಆ ಗೂಡೆನ ಮಾತಾಡ್ಸಿ, ನೀವು ಇರುವಲ್ಲಿಗೆ, ಕರ್ಕಂಡ್ ಬನ್ನೆ. ನಂಗೆ ಎಂತ ಕೊಟ್ಟರೆಂತ ಬೆಟ್ಟ್ ಕಟ್ಟಿತ್‌ಗಡ. ಒಂದು ವೇಳೆ ನೀ ಹಾಂಗೆ ಮಾಡಿರೆ ನಿಂಗೆ ಕುಡಿವಷ್ಟ್ ಸರಾಯ ಮತ್ತೆ ಕೋಳಿಗೈಪು–ಪೊಕ್ಕಳ ರೊಟ್ಟಿಂತ. ಉಳ್ದವೆಲ್ಲ ಬೆಟ್ಟ್‌ಗೆ ಒಪ್ಪಿದೊ.

ಈ ಕುಶಲ ಒಂದ್ ಕಿಣಿ ಮಾಡ್ತ್. ಹಿಂಬೊತ್‌ಹಿಂಬೊತ್ ಆಕನ ಅವನ ಹಟ್ಟಿಲಿದ್ದ ಕರ್ ಬುಡುವ ಹಸ್‌ನ ಈ ಮೊದುಮಜನ ಮನೆಗೆ ಹೊಡ್ಕಂಡ್ ಹೋತ್. ಹಸ್‌ನ ಕುತ್ತಿಗೆಗೆ ಬೊಳ್ಳಿನೂ ಹಾಕಿಟು. ಅವನ ಮನೆ ಮುಂದೆ ನಿತ್ತ್ ಕರ್ತ್. ಓ ಅಣ್ಣಾ . ಓ ಅಣ್ಣಾಂತ . ಅಂವ ನೆನ್ಸಿದಾಂಗೆ ಮೊದುಮಜನೇ ಓಡಿ ಬಂದ್ ಎಂತಣ್ಣಂತ ಕೇಳ್ತ್. ಆಗ ಕುಶಲಣ್ಣ ಹೇಳ್ತ್. ನಾ ಹಸ್‌ನ ಕಾಡಿಗೆ ಮೇಯಕೆ ಬುಟ್ಟಿದೆ. ಅದ್ಕೆ ಪಾಪ ದಾರಿ ತಪ್ಪಿ ಮನೆ ಕಡೆ ಬಾಕೆ ಗೊತ್ತಾತ್ಲೆ. ಅದರ ಇಷ್ಟೊತ್ತಿಗೆ ನಾವು ಕರ್ ಬುಟ್ಟ್ ಹಾಲ್ ಕರ್ದವೆ. ಅದರ ಅದೇ ಹೊತ್ತಿಗೆ ಬುಡದಿದ್ದರೆ ಹಾಲ್ ಚಪ್ಪೆ ಆದೆಂತ ಹೇಳ್ತ್. ನೀವು ಅಕ್ಕನೊಟ್ಟಿಗೆ ಒಂದು ಚೊಂಬು ಕೊಡಿಕೆ ಹೇಳಿ. ಬೇಗ ಹಾಲ್ ಕರ್ದ್ ಕೊಟ್ಟನೆಂತ ಹೇಳ್ತ್. ಆದರೆ ಇಂವ ಹೆಣ್ಣ್‌ನ ಕಳ್ಸುವ ಬದಲ್‌ಗೆ ಇಂವನೇ ಒಳಗೆ ಹೋಗಿ ಒಂದ್ ತಾಮ್ರದ ಚೊಂಬು ತಂದ್ ಕೊಟ್ಟತ್. ಇಂವ ಹಸ್‌ನ ಜಾಲ್ ಮೂಲೆಲಿದ್ದ

ಕಂಬಂಕ್ಕೆ ಕಟ್ಟಿ ಹಾಕಿತ್. ಇಂವ ಮುಂದೇನೆ ಕಂಬಾಯಿ ಕೊಡಿಲಿ ಕಟ್ಟಿಕೊಂಡಿದ್ದ ಸಕ್ಕರೆನ ಅವಂಗೆ ಕಾಣದಾಂಗೆ ಚೊಂಬುಗೆ ಸೊರ್‍ಗಿತ್. ಸೊರ್‍ಗಿ ಹಾಲ್ ಕರೆಕೆ ಶುರು ಮಾಡ್ತ್. ಹಾಲ್ ಎತ್ತರ್‌ಂದ ಚೊಂಬುಗೆ ಬಿದ್ದದರ್‌ಂದ ಸಕ್ಕರೆ ನೀರ್ ಆಗಿ ಚೊಂಬುಲಿ ಬುದು ಬುದು ನೊರೆ ಬಾತ್. ಚೊಂಬು ತುಂಬಾ ಹಾಲ್ ಆದ ಮೇಲೆ ಮೊದುಮಜನ ಕರ್ದ್ ಕೊಟ್ಟತ್. ಹೇಂಗೂ ನೀವಿಬ್ಬರೂ ಮೊನ್ನೆ ಮೊನ್ನೆ ಮೊದ್ವೆ ಆದೊವು. ಬಿಸಿ–ಬಿಸಿ ಹಾಲ್ ಕುಡೆನೀಂತ ಕೊಟ್ಟತ್. ಇಂವ ಚೊಂಬುನ ತಕ್ಕಂಡ್ ಹೋಗಿ ಹೆಣ್ಣ್‌ನ ಕೈಲಿ ಕೊಟ್ಟತ್. ಇಂದ ನೀ ಬೇಕರೆ ಹಾಲ್ ಕುಡಿ. ನಾ ಮತ್ತೆ ಕುಡ್ದನೆಂತ. ಆ ಮೊದೊಳಿಗೆ ಒಂದ್ ಗ್ಲಾಸ್ ಹಾಲ್‌ನ ಚೊಂಬುಂದ ತೆಗ್ದ್ ಕುಡ್ತ್. ಅಬ್ಬಾ .. ಎಂತ ರುಚಿ ಮತ್ತೆ ಎಂತ ಸಿಹಿ.......? ಮೊದುಮಜ ಹೊರಗೆ ಇವನೊಟ್ಟಿಗೆ ಮಾತಾಡಿಕೆ ಬಂದವನ ಹೆಣ್ಣ್ ಒಳಗೆ ಕರ್ತ್. ಇಂದನಿ ಈ ಹಾಲ್ ಕುಡ್ದ್ ನೋಡಿ. ಎಷ್ಟ್ ಚೀಪೆ ಉಟ್ಟುಂತ ಅರ್ಧ ಗ್ಲಾಸಿಗೆ ಹೊಯ್ದ್ ಗಂಡಂಗೆ ಕೊಟ್ಟತ್. ಇಂವನೂ ಕುಡ್ಯಾಕನ ಬಾರೀ ಸಿಹಿ........

ಹೆಣ್ಣ್ ಗಂಡನೊಟ್ಟಿಗೆ ಹೇಳ್ತ್. ಆ ಹಸ್‌ನ ತಕ್ಕಣಿ, ನಂಗೆ ಬೇಕು ಎಷ್ಟ್ ದುಡ್ಡಾದರೂ ತೊಂದರೆ ಇಲ್ಲೆಂತ. ಹಾಂಗೆ ಗಂಡ ಹೋಗಿ ಕೇಳ್ತ್. ಅಣ್ಣ ಆ ಹಸ್‌ನ ನಾವ್ಗೆ ಕೊಡೊಕುಂತ ನನ್ನ ಹೆಣ್ಣ್ ಮೊನ್ನೆ ಮೊದ್ವೆ ಆದ್, ಹೇಳ್ತಾ ಉಟ್ಟು . ಎಷ್ಟ್ ದುಡ್ಡಂತೇಳಿರೆ ಕೊಟ್ಟನೆಂತ. ಆಗ ಕುಶಲಣ್ಣ ಹೇಳ್ತ್. ಇಲ್ಲೆಣ್ಣ ನಾ ಅದರ ಮಾರ್ದುಲೆ. ಹೇಳ್ದಾಂಗೆ ನೀವು ಮೊದ್ವೆ ಆಗಿ ಮೊದಳಿಗೆನಾ ನಂಗೆ ತೋರ್‍ಸಿತ್ತ್‌ಲ್ಲೆ. ನಾ ಮತ್ತೆ ಹೇಂಗೆ ಕೊಡ್ದುಂತ ಹೇಳ್ತ್. ಅಯ್ಯನ ಬಂಡೆ ಇಂವ ಎಂತ ನನ್ನ ಹೆಣ್ಣ್‌ನ ನೋಡುಕುಂತ ಹೇಳ್ತ ಉಟ್ಟಲ್ಲಂತ. ಈ ಹಸ್‌ನೇ ಬೇಡಂತ ಒಳಗೆ ಹೋತ್. ಆಗ ಹೆಣ್ಣ್ ಎಂತಾತ್‌ಂತ ಕೇಳ್ತ್. ಅಂವಂಗೆ ನಿನ್ನ ನೋಡೊಕಡ ಅಂದರೆ ಮಾತ್ರ ಕೊಡ್ದುಗಡಂತ ಹೇಳ್ತ್. ಆಗ ಹೆಣ್ಣ್ ಅದರ್ಲಿ ಎಂತಾಕು, ಒಮ್ಮೆ ನೋಡಿರೆ ನಾ ಎನ್ ಸತ್ತ್ ಹೋನೆನಾಂತ ಹೊರಗೆ ಬಾತ್ ಗಡ. ಆಗ ಕುಶಲಣ್ಣ ನೋಡ್ತ್. ಅಬ್ಬಾ ಎಂತ ಪೊರ್ಲುನ ಹೆಣ್ಣ್. ಮೈಕೈ ತುಂಬಿಕಂಡ್ ಬಾಳೆಗೊನೆ ಹಾಕಿಕೆ ರೆಡಿ ಆದಾಂಗೆ ಉಟ್ಟಲ್ಲಾ .. ಏನ್ ಅಕ್ಕಾಂತ ಇವಂಗೆ ಕೇಳಿಯೇ ಹೋತ್. ಒಳ್ಳೆದ್ ..ಂತ ನಾಚಿಕಂಡ್ ಹೇಳ್ತ್. ಬಾಯಿ ಬುಟ್ಟರೆ ಮಲ್ಲಿಗೆ ಮೊಗ್ಗುನ ಮಾಲೆ ಕಟ್ಟಿದಾಂಗೆ ಹಲ್ಲ್‌ಗ. ಗುಂಗುರು ಕೂದಲ್, ತಲೆಬುಂಡಾದ, ಕುಂಡೆಗೆ ಮುಟ್ಟಿ ದನದ ಬಾಲದಾಂಗೆ ಜೆಡೆ. ಇದರ ನೋಡಿರೆ ನಾ ಮಾತ್ರ ಅಲ್ಲ; ಊರ್‌ನ ಎಲ್ಲಾ ಹುಡ್ಗರ್ ಆಸೆ ಪಡುವಂತ. ಜೀವನಲಿ ಒಮ್ಯಾರ್ ಈ ಹೆಣ್ಣ್‌ನ ತಬ್ಬಿಕಂಡ್ರೆ ಸಾಕ್‌ಂತ ಇವನೂ ಮನ್ಸ್‌ಲೇ ನೆನ್ಸಿಕಂಡ್ ಹಸ್‌ನ ಬೊಳ್ಳಿ ಬಿಚ್ಚಿತ್. ಕೂಡ್ಲೇ ಮೊದೊಳಿಗೆ ಗೂಡೆ ಒಳಗೆ ಓಡ್ತ್. ಗಂಡನ ನೂಕಿ ಬುಟ್ಟತ್. ಆ ಹಸ್‌ನ ಕೇಳಿ ನಂಗೆ ಬೇಕುಂತ. ಮೊದಮಜ ಬಂದ್ ಹೇಳ್ತ್ ಅಣ್ಣ, ನನ್ನ ಹೆಣ್ಣ್‌ನ ತೋರ್‍ಸಿ ಆತಲ್ಲ. ಆ ಹಸ್‌ನ ಕೊಡಿಂತ. ಓ ಹೇ .

ಹಾಂಗೆಲ್ಲ ಬರೀ ನಿನ್ನ ಹೆಣ್ಣ್‌ನ ನೋಡಿ ಈ ಹಸ್‌ನ ಕೊಡುವೆ ಅಕ್ಕ್‌ಂತ ಹೇಳ್ತ್. ಮತ್ತೆಂತಾಕು ಅಣ್ಣ; ಹೇಳ್‌ಂತ ಒತ್ತಾಯ ಮಾಡ್ತ್.

ಆಗ ಕುಶಲಣ್ಣ ಮನ್ಸಿಲಿದ್ದದರ ಹೇಳಿರೆ ನೀ ನಡ್ಸಿ ಕೊಡುವುವಾನಂತ ಕೇಳ್ತ್. ಓ ಧಾರಾಳ. ನನ್ನ ಹೆಣ್ಣ್‌ಗೆ ಬೇಕಾಗಿ ಏನ್ ಬೇಕಾರೂ ಮಾಡೆನೆಂತ ಹೇಳ್ತ್. ಅಂದರೆ ಕೇಳ್. ನಿನ್ನ ಹೆಣ್ಣ್‌ನ ಒಮ್ಮೆ ತಬ್ಬಿಕಾಂಕೆ ಬುಡೋಕು. ಆಗ ನೀ ಮಾತ್ರ ಹಕ್ಕಲೆ ಬೇಕು. ಯಾಕೆ ತೇಳಿರೆ ತಬ್ಬಿಕಾಕನ ಕುಷಿ ಅಗಿ ನಿನ್ನ ಹೆಣ್ಣ್ ಎಲ್ಲಿಯಾರ್ ನಂಗೆ ಮುತ್ತ ಕೊಟ್ಟರೆ ನಾ ಆಗಳೆ ಸತ್ತೇ ಹೋನೆ. ನಂಗೆ ದೇವರ್ದ್ ಅಂತ ಶಾಪ ಉಟ್ಟುಂತ ಸುಳ್ಳ್ ಹೇಳ್ತ್. ಈಗ ಮಾತ್ರ ಇವಂಗೆ ಎಲ್ಲಿಲ್ಲದ ಕೋಪ ಬಾತ್. ನಿನ್ನ ಹಸ್‌ನ ಬೊಗುಳಾದೆ ಹೊಡ್ಕಂಡ್ ಹೋಗು. ನನ್ನ ಹೆಣ್ಣ್‌ನ ತೋರ್ಸಿದೇ ದೊಡ್ಡ ತಪ್ಪು. ಇಷ್ಟರ ಮುಟ್ಟ ಯಾರಿಗೂ ತೋರ್ಸಿತ್ತಿಲ್ಲೆ. ಈಗ ತಬ್ಬಿಕಾಂಕ್‌ತೇಳಿಯ. ಏನ್‌ಂತ ತಿಳ್ಕಂಡಳಾ. ನಡಿ ಇಲ್ಲಿಂದಂತ ಬಾರೀ ಕೋಪಲಿ ಹೇಳ್ತ್. ಇದರ ಕೇಳಿಕಂಡಿದ್ದ್ ಹೆಣ್ಣ್ ಗಂಡನ ಒಳಗೆ ಕರ್ದ್. ನೋಡಿ ಇಂತಹ ಚೀಪೆ ಪೇರ್ ಹಾಲ್ ಕೊಡುವ ಹಸ್‌ನ ನಾ ಎಲ್ಲಿನೂ ನೋಡ್ತಿಲ್ಲೆ. ಬಹುಶ: ಇದ್ ಸ್ವರ್ಗಲೋಕದ ಕಾಮಧೇನು ಆಗಿರೋಕು. ನನ್ನ ಒಮ್ಮೆ ಅಂವ ತಬ್ಬಿಕಂಡ್ರೆ ಏನೂ ಆದುಲೆ. ಮತ್ತೆ ದಿನಾಲೂ ನೀವು ಮಾತ್ರ ತಬ್ಬುದಲ್ಲ..? ಅಷ್ಟಕ್ಕೂ ಇಲ್ಲಿ ನಾವು ಮೂರು ಜನ ಬುಟ್ಟರೆ ಯಾರೂ ಇರ್ದುಲ್ಲೆ, ಒಪ್ಪಿಕಣಿಂತ ಒತ್ತಾಯ ಮಾಡ್ತ್. ನಿಮ್ಮ ದಮ್ಮಯ್ಯ ನಂಗೆ ಆ ಹಸ್ ಬೇಕೂಂತ ಮರ್ಡಿಕೆ ಶುರು ಮಾಡ್ತ್. ಆಗ ಗಂಡ ಹೇಳ್ತ್ ನೋಡು ನಾ ಕೂಡ ಅಲ್ಲಿರೊಕಡ, ನೀ ಎಲ್ಯರ್ ಅವಂಗೆ ಮುತ್ತು ಕೊಟ್ಟರೆ ಅಂವ ಆಗಳೇ ಸತ್ತದೆಗಡ. ಹಾಂಗೆ ಅವಂಗೆ ದೇವರ ಶಾಪ ಉಟ್ಟುಗಡ. ಇಲ್ಲೆ ದೇವ್ರೇ ನಾ ಮುತ್ತು ಕೊಡಿಕಿಲೆ ಅವಂನ ಕರೀನಿಂತ ಹೇಳ್ತ್‌ಗಡ. ಉಪಾಯ ಇಲ್ದೆ ಅಂವ ಕುಶಲಣನ ಒಳಗೆ ಕರ್ತ್. ಬಾ ಮಾರಾಯ . ನನ್ನ ಹೆಣ್ಣ್‌ನ ತಬ್ಬಿಕ. ಒಳಗೆ ಬಾಂತ ಹೇಳ್ತ್ ಗಡ. ಕುಶಲ ಒಳಗೆ ಹೋಗಿ ಅವನ ಎದುರೇ ಬಾರೀ ಕುಷಿಲಿ ಮೊದೊಳಿಗೆನ ತಬ್ಬಿಕಂತ್ ಗಡ. ನಾ ಈಗಳೇ ಸತ್ತರೂ ತೊಂದರೆ ಇಲ್ಲೆ ಇಂತ ಮೈಕಟ್ಟ್‌ನ ಗೂಡೆನ ತಬ್ಬಿಕಾಂಕನ ಸ್ವರ್ಗದ ಅನುಭವ ಅಂವಂಗೆ ಆತ್ ಗಡ. ನೋಡಿಕಂಡ್ ಇದ್ದ ಗಂಡ ಎಳ್ದ್ ಬುಟ್ಟತ್‌ಗಡ. ಸಾಕ್ ಸಾಕ್ ಎಷ್ಟ್ ಹೊತ್ತು ತಬ್ಬಿಕಾಂದೂಂತ ಬುಡ್ಸಿತ್‌ಗಡ. ಕುಶಲ ಹೊರಗೆ ಬಂದ್ ಹಿಂದಕ್ಕೆ ಹಸ್‌ನ ಬಿಚ್ಚಿತ್‌ಗಡ. ಅದಾ ಹಿಂದಕ್ಕೆ ಎಲ್ಲಿಗೆ ಹಸ್‌ನ ಬಿಚ್ಚುದು. ನನ್ನ ಹೆಣ್ಣ್‌ನ ತಬ್ಬಿಕಂಡ್ರೆ ಕೊಟ್ಟನೆ ತೇಳ್ದಲ್ಲಂತಾ ಹೇಳ್ತ್‌ಗಡ. ಅರೆ, ಹೀಂಗೆ ಪುಸ್ಕಟ್ಟೆ ಒಮ್ಮೆ ತಬ್ಬಿಕಂಡ್ರೆ ನಾ ಹಸ್‌ನ ಕೊಡುವೆ ಅಣ್ಣಾ; ಏನ್‌ಂತ ಗ್ರೇಸಳರಿ ಈ ಹಸ್‌ನ ? ಇದ್ ದೇವಲೋಕದ ಹಸ್‌ಂತ; ಹಸ್‌ನ ಎಳ್ಕಂಡ್ ಹೋಕೆ ಶುರು ಮಾಡ್ತ್‌ಗಡ. ಕೋಪ ತಡೆಕ್ಕಾಗದೆ ಹೆಣ್ಣ್‌ನೊಟ್ಟಿಗೆ ಹೇಳ್ತ್‌ಗಡ ಹೋಗು, ಹೋಗು ಅವನ ಹಿಡ್ದ್ ಮುತ್ತು ಕೊಡು. ಅಂವ ಸತ್ತೇ ಹೋಗಲಿಂತ ಹೇಳ್ತ್ ಗಡ. ಮೊದೊಳಿಗೆ ಅವನ ಓಡ್ಸಿಕೆ ಶುರು ಮಾಡ್ತ್ ಗಡ. ಇಂವ ಸೀದಾ

ಹುಡಗರ್ ಕುದ್ಕಂಡಿದ್ದ ಕಟ್ಟಪುಣಿ ಕಡೆಗೆ ಓಡಿ ಬಾತ್‌ಗಡ. ಈ ಮೊದೊಳಿಗೆ ಇವನೊಟ್ಟಿಗೆ ಓಡಿ ಬಂದ್ ಆ ಹುಡ್ಗರ ಎದುರಿಗೆ ಇವನ ಹಿಡ್ದ್ ಲೊಚ–ಲೊಚಂತ ಮುತ್ತ್ ಕೊಟ್ಟತ್ ಗಡ. ಇಂವ ಕುಷಿಲಿ ಸತ್ತವರಾಂಗೆ ಬಿದ್ದ್‌ಕಂತ್ ಗಡ. ಮೊದೊಳಿಗೆನ ಎಲ್ಲವೂ ನೋಡಿ ಕುಷಿಪಟ್ಟಗಡ. ಮೊದೊಳಿಗೆ ನಾಚಿಕೆಲಿ ಮನೆ ಕಡೆ ಓಡ್ತ್‌ಗಡ. ಅದ್ ಹೋದ ಮೇಲೆ ಇಂವ ನಡ್ದ ಕಥೆನೆಲ್ಲ ಹೇಳ್ತ್ ಗಡ. ಅಂತೂ ನೀ ಬಿರ್ಸ್ ಕುಶಲಂತ ಎಲ್ಲವೂ ಬೆನ್ನ್ ತಟ್ಟಿ ಇಂವಂನ ಮನೆಗೆ ಕರ್ಕಂಡೋಗಿ ಗಮ್ಮತ್ತ್ ಸರಯ, ಕೋಳಿಗೈಪು, ಪೊಕ್ಕುಳರೊಟ್ಟಿ ಮಾಡಿಕೊಟ್ಟ ಗಡ.

****

# 7. ಉಬರ್ ಮೀನ್



ಮುಂದೆನ ಕಾಲಲಿ 'ಉಬರ್ ಮೀನ್' ತೇಳಿರೆ ಸರ್ವೆ ಸಾಮಾನ್ಯ. ಎಲ್ಲ ಕಡೆ ಗದ್ದೆ ಬೇಸಾಯ ಇರ್ದ್‌ರ್‌ಂದ ಜೋರು ಮಳೆ ಬಾಕನ ಕಣ್ಕ್ ನೀರಿಗೆ ಮೀನ್ ಹಳ್ಳಂದ ಹತ್ತಿಕಂಡ್ ಸಣ್ಣ–ಸಣ್ಣ ಚೋಡಿಗಳಿಗೆ ಸೇರಿ, ಅಲ್ಲಿಂದ ಗದ್ದೆಗಳಿಗೆ ಹತ್ತುವೊ. ಆ ಸಮಯ ನೋಡಿ ಮನೆಲಿದ್ದೊವು ಗದ್ದೆ ಗಡಿಗಳಿಗೆ ಕೂಳಿನೋ, (ಚಾಳೆಕಡ್ಡಿ, ಇಲ್ಲರೆ ಬೆದ್‌ರ್ ಕಡ್ಡಿಂದ ಉರುಂಟು ಮದ್ದಳೆನಾಂಗೆ ನೇಯ್ದ್ ಕಟ್ಟುವ ಒಂದು ರೀತಿನ ಕುಕ್ಕೆ) ಯಾಪೆನೋ, (ಬೆದ್ರ್ ಬಾಸಾಂದ ತೊಟ್ಟಿಲ್‌ನಾಂಗೆ ಕಟ್ಟಿ ತುಂಬಾ ಎತ್ತರಣದ ನೀರ್ ಬೀಳುವಲ್ಲಿಗೆ ಕಟ್ಟುವ ಕ್ರಮ) ಕಟ್ಟಿ ಮೀನ್ ಹಿಡೆವೋ. ಕೆಲವು ಜನ ಮಜಲ್ ಗದ್ದೆಗಳ್ಲಿ ತೆಳ್ಳಂಗೆ ನೀರಿಗೆ ಚಳ–ಪಳ ಮೀನ್‌ಗ ಹತ್ತಿಕಂಡ್ ಬಾಕನ ಕತ್ತಿಲಿ ಕಡ್ದ್ ಹಿಡ್ಕಂಬೊ. ಇದ್ ಮೀನ್ ಹತ್ತಿಕಾಕನೊನೊ, ಇಲ್ಲದಿದ್ದರೇ ಮಳೆ ಬಂದ್ ಹೋದ ಮೇಲೆ ನೀರ್ ಕಮ್ಮಿ ಆಕನ ನೀರ್ ಇಳ್ದದ್ ಗೊತ್ತಾಗದೆ ಮೀನ್‌ಗ ಅಲ್ಲೆ ಬಾಕಿ ಆದೋವು ಕೂಡಾ ಕತ್ತಿಲಿ ಕಡೆಕೆ ಸಿಕ್ಕುವೆ. ಹೆಚ್ಚಾಗಿ ಕಲ್ಲ್‌ಮುಳ್ಳ, ಕೂರ್ಲು, ಕರಿಮೀನ್, ಕೆಲವೊಮ್ಮೆ ಹಾವು ಮೀನ್, ಮೂಡು, ಬಾಳೆ, ಹೀಂಗೆ ಬೇರೆ ಬೇರೆ ಜಾತಿನ ಮೀನುಗ ಹೆಚ್ಚಾಗಿ ಸಿಕ್ಕುವೊ.

ಒಮ್ಮೆ ಹೀಂಗೆ ಆತ್‌ಗಡ. ಒಂದು ಊರ್‌ಲಿ ಒಬ್ಬ ಹೊಸದಾಗಿ ಮೊದ್ವೆ ಆದಂವ ಹೆಣ್ಣ್‌ನ ಮನೆಗೆ ಬಾತ್. ಹೆಣ್ಣ್ ಮುಂದೆನೇ ತವರಿಗೆ ಹೋಗುಟ್ಟು. ಇಂವ ಕರ್ಕಂಡ್ ಬಾಕೆ ಹೋದೊ ಏನೋ. ಮನೆಂದ ಹೊರ್ಟ್ ನಡ್ಕಂಡೇ ಹೋತ್. ಅತ್ತೆ ಮನೆಗೆ ಮುಟ್ಟಿಕಾಕನ ಮಧ್ಯಾಹ್ನ ಕಳ್ದ್ ಎಲ್ಲವೂ ಉಂಡು ಕಳೆವ ಹೊತ್ತ್. ಅಂದ್ ಬಾರೀ ಮಳೆ ಬಾತಿತ್. ಒಂದು ದೊಡ್ಡ ಮರದ ಕಾಲ್‌ನ ಕೊಡೆನ ಸೂಂಡಿಕಂಡ್ ಇಂವ ಹೊರ್ಟ್ಂವ ಒಂದು ರೀತಿಲಿ ನಾಚಿಕೆ ಸ್ವಭಾವದಂವ. ಹೆಚ್ಚ್ ಯಾರೊಟ್ಟಿಗೂ ಮಾತಾಡ್ತಿತ್ತಿಲ್ಲೆ. ಹೆಣ್ಣ್‌ನ ಮನೆಗೆ ಮುಟ್ಟಿಕಾಕನ ಕಟ್ಟಿ ಹಾಕಿದ ಕೆಂಜು ನಾಯಿ ಬೊಗುಳ್ತಾ ಉಟ್ಟು. ಮನೇಲಿ ಯಾರೂ ಕಾಂಬೊದುಲೆ. ಎತ್ತ ಹೋಗೊಳೊ, ಎಲ್ಲಿಂತ ಆಲೋಚನೆ ಮಾಡ್ತ್.

ನನ್ನ ನೋಡಿ ಹೆಣ್ಣ್ ಹೊರಗೆ ಬರಕಿತ್ತಲ್ಲ. ಬಾವಂದರೂ ಕಾಂಬೊದುಲೆ. ಒಮ್ಮೆ ಇವಂಗೆ ಮನ್ಸ್‌ಲೇ ಹೆದ್ರಿಕೆ ಆತ್. ಮನೆ ಹಕ್ಕಲೆ ಎತ್ತಿಕಾಕನ ಅತ್ತೆ ಕೈಲಿ ಕತ್ತಿ ಹಿಡ್ಕಂಡ್, ಬಾಗ್ಲ್ ಹಾಕಿ ಕಿಡ್ಜೋಂಜಿಳಿಗೆ ಕೈ ಹಾಕ್ತ್ತಿದ್ದೊ. ಇಂವ ದೂರದಂಳೇ ಏನತ್ತೇ....ಂತ ಕೇಳ್ತ್. ಓ ಒಳ್ಳದಣ್ಣಾ.. ನೀವು ಈಗ ಬಾದೊ. ಬಾರೀ ಹೊತ್ತಾತಾಂತ ಹೇಳಿಕಂಡ್ ಹಾಕಿಕೆ ರೆಡಿ ಆದ ಬಾಗ್ಲ್‌ನ ತೆಗ್ದೊ. ಒಳಗೆ ಹೋಗಿ ಚೊಂಬುಲಿ ನೀರ್ ತಂದ್ ಕೊಟ್ಟೊ. ತುಂಬಾ ಮಳೆಂದಾಗಿ ಅಲ್ಲಿ ಚೋಡಿ ಕಟ್ಟಿಟ್ಟು. ಚೂರು ನೀರ್ ಇಳ್ಯೇಲಿಂತ ಹಱ ಹೊತ್ತ್ ಅಲ್ಲೆ ಕುದ್ದ್ ಬಂದೆಂತ ಹೊತ್ತಾದ ಕಾರಣ ಕೇಳ್ತ್. ಹೇಳ್ದಾಂಗೆ ನೀವುಗೆ ಊಟ ಆಗುಟಾಂತ ಅತ್ತೆ ಕೇಳ್ದೊ. ಇಂವ ನಾಚಿಕೆಲಿ ಇಲ್ಲೆಂತ ಮೆಲ್ಲ ಹೇಳ್ತ್. ನೀವು ಬಾವೊರಿಂತ ಮಕ್ಕ ಬೇಗ ಕೋಳಿ ಎಲ್ಲ ಕೊಂದ್ ಗೈಪು ಮಾಡಿಸಿ ನಿಮ್ಮ 2 ಗಂಟೆ ಮುಟ್ಟ ಕಾದೊ. ಇನ್ನ್ ಹಿಂಬೊತ್ತಾಕನ ಬಂದರೆನೋಂತ, ಉಂಡು ಮಜಲ್ ಗದ್ದೆ ಕಡೆ ಹೋಗೊಳೋ.

ಇವಂಗೆ ಹೆಣ್ಣ್ ಎತ್ತ ಹೋಗುಟುಂತ ಕೇಳಿಕೆನೂ ನಾಚಿಕೆ ಆತ್ ಇವಂನ ಮೋರೆ ನೋಡಿ, ಅರ್ಥ ಮಾಡಿಕಂಡ ಅತ್ತೆನೇ...... ಮಗಳು ಜಾನಕಿ ಕೂಡ ಅವರೊಟ್ಟಿಗೆ ಗದ್ದೆಕ್ಕಲೆ ಹೋಗುಟ್ಟು. ನಿನ್ನ ಮಾವನೂ ಎಲ್ಲಿಗೋ ಗದ್ದೆ ಗಡಿಗೆ ಕೂಳಿ ಇಸೊಕುಂತ ಹೋದೊ. ನೀವು ಚೂರು ಹೊತ್ತು ಬರದಿದ್ದರೆ ನಾನು ಗದ್ದೆಕ್ಕಲೆ ಮೀನ್ ಕಡ್ಯೇಕೆಂತ ಹೋತಿದ್ದೆ. ಅತ್ತೆ ಒಂದೇ ಉಸುರುಲಿ ಇಡೀ ಕಥೆನ ಹೇಳ್ದೊ. ಅಣ್ಣ  ನೀವು ಬೇಗ ಉಂಡುಕಣಿ, ಎದ್ರಿಂತ ಚೊಂಬುಲಿ ಅತ್ತೆ ನೀರು ಕೊಟ್ಟೊ. ಇಂವ ಅಲ್ಲೆ ಬಾಗ್ಲ್‌ಲಿ ಜಾಲ್‌ಗೆ ಕೈ ತೊಳ್ತ್. ಅತ್ತೆ ಒಟ್ಟಿಗೆ ಬಾಳ್ಲೆನೂ, ಮಣೆನೂ ತಂದ್ ಇಸಿದೊ. ಇಂವ ಮಣೆಲಿ ಕುದ್ದತ್ತ್. ಅತ್ತೆ ಕುಡ್ಪುಲಿ ಹುಗ್ಗಿ ತಂದ್ ಇಕ್ಕಿದೊ. ಒಟ್ಟಿಗೆ ಮೊಣ್ಣು ಅಳೆಗೆಂದ ಕೋಳಿಗೈಪು ಇಕ್ಕಿದೊ. ಅಳಿಯ ಬಾದುಂತೇಳಿ ಕರಿಯಡ–ಬಟ್ಟಕಾಯಿನೂ ತೆಗ್ದ್‌ಸಿದರ ತಂದ್ ಇಕ್ಕಿದೊ. ಬಾಗ್ಲ್ ಮೂಲೇಲಿ ಹೋಗಿ ಅಳಿಯ ಉಂಬದರ್‌ನೇ ನೋಡ್ತ ಅತ್ತೆ ನಿತ್ತೊ. ಅತ್ತೆಗೆ ಮೀನ್ ಕಡೆಕೆ ಜೀವ ಎಳಿತಾ ಉಟ್ಟು. ಮನೇಲೆಲ್ಲ ಉಷಾರೊಳೊನಾಂತ ಕಾಟಚಾರಕೆ ಕೇಳ್ತ್. ಇಂವ ನಿಧಾನಲಿ ಹುಗ್ಗಿನ ಕೋಳಿ ಸಾರ್‌ನೊಟ್ಟಿಗೆ ಕಲ್ಸಿ ಉಂಬಕೆ ಸುರು ಮಾಡ್ತ್. ಅತ್ತೇನೂ ಇವನೊಟ್ಟಿಗೆ ಮಾತಾಡಿರೆ ಬೇಗ ಉಂಬಕ್ಕಿಲ್ಲೆಂತ ಸುಮ್ಮನಾಕಂತ್. ಕೋಳಿಗೈಪು ಹಱ ಚೆಣ್ದುಟು. ಆದರೂ ಹೊಟ್ಟೆ ಇಸಿ ಲೋಕನೇ ಇಲ್ಲದ ಇವಂಗೆ ಬಾರಿ ಲ್ಯಾಕ್ ಆತ್. ತುಂಡೆಲ್ಲ ತೀಂತ್. ಈ ಕರಿಯಡ–ಬಟ್ಟಕಾಯಿ ತೇಳಿರೆ ಇವಂಗೆ ಬಾರೀ ಇಷ್ಟ. ಇದರ ಲಾಸ್ಟ್‌ಗೆ ತಿನೋಕುಂತ ಬಾಳ್ಲೆ ಕರೇಲಿ ಇಸಿತ್. ಅತ್ತೆ, ಹಱ ಹುಗ್ಗಿ ತರಕಾಂತ ಕೇಳ್ತ್. ಬೇಡಂತ ತಲೆ ಅಲ್ಲಾಡಿಸಿತ್. ಇಂವ ಹುಗ್ಗಿ ಎಲ್ಲ ಉಂಡತ್, ಆದ್ರೆ ಕರಿಯಡ–ಬಟ್ಟಕಾಯಿ ತಿಂತಿಲೆಲ್ಲಂತ ಅತ್ತೆ ಯೋಚನೆ ಮಾಡಿ . ಅಣ್ಣ ಚೂರು ಹುಗ್ಗಿ ತರಕಾಂತ ಮತ್ತೊಮ್ಮೆ ಕೇಳ್ತ್. ನಂಗೆಂತ ಬೇಡ ಅತ್ತೆ. ಎಲ್ಲ

ಸಾಕ್‌ಂತ ಹೇಳ್ತ್. ಅಳಿಯ ಹೇಳ್ದ್ ಒಂದೇ ತಡ. ಅತ್ತೆ ಕಂಟಕೊತ್ತಿ ಕೈ ಹಾಕಿದಾಂಗೆ ಬಾಳ್ಲೆಗೆ ಕೈ ಹಾಕಿ ಮುದ್ದೆ ಮಾಡಿ, ಎದ್ರಿ ಅಣ್ಣ. ಚೊಂಬುಲಿ ನೀರುಟ್ಟು ಕೈ ತೊಳ್ಕಣಿಂತ ಹೇಳ್ತ್. ಅಳಿಯಗೆ ಎಂತ ಮಾಡೊಕುಂತ ಗೊತ್ತಾತ್ತಿಲ್ಲೆ. ಆಸೆಲಿ ಕಡೇಗೆ ತಿಂಬಕೆ ಇಸಿದ ಕರಿಯಾಡ–ಬಟ್ಟಕಾಯಿನ ಅತ್ತೆ ಬಾಳ್ಲೆ ಒಟ್ಟಿಗೆ ಮುದ್ದೆ ಮಾಡ್ದೊ. ಬೇಕುಂತ ಕೇಳಿಕೆ ನಾಚಿಕೆ ಆತ್. ಅತ್ತೆ ಇವಂಗೆ ಇದೆರ್‌ಡ್ ಸೇರ್ದುಲೆ ಕಂಡದೆ. ನಾ ಆರ್ ತಿಂಬೊತ್ತಿದ್ದೆ. ಧರ್ಮಕ್ಕೆ ನಾಯಿಗೆ ಹಾಕಿಕಾತ್ತಲ್ಲಂತ ಮನ್ಸ್‌ಲೇ ಬೊಯ್ಕಂಡೊ. ಅತ್ತೆ ಇಂವ ಕೈ ತೊಳ್ದಾಂಗೆ ಅಣ್ಣ ನೀವು ಮನೇಲಿ ಇದ್ದರೆನಾ–ಅಲ್ಲ ಗದ್ದೆ ಹಕ್ಕಲೆ ಬಂದರೆನಾ. ನಾ ಮೀನ್ ಕಡ್ಯೆಕೆ ಹೊರ್ಟ್‌ದ್‌ಂತ ಹೇಳ್ತ್. ಅಳಿಯ ಉಪಾಯ ಇಲ್ಲದೆ ನಾನು ಬನ್ನೆ ಪೋಯಿಂತ ಅತ್ತೆನೊಟ್ಟಿಗೆ ಹೊರ್ಟತ್. ಅತ್ತೆ ಬಾಗಿಲ್ ಎಳ್ದ್ ಕುಂಡೆ ಹೊಣ್ಕ್‌ಸಿಕಂಡ್ ಗದ್ದೆಕ್ಕಲೆ, ಹೋತಾನೆ ಇದ್ದೊ. ಅಯ್ಯೋ ಈ ಉಬರ್ ಮೀನ್‌ದಾಗಿ ಅತ್ತೆನ ಅರ್ಜೆಂಟ್‌ಲಿ ನಾ ಕರಿಯಾಡ ಬಟ್ಟಕಾಯಿ ತೀಂತಿಲೆಲ್ಲಂತ ಹೊಟ್ಟೆ ಉರ್ಸಿಕಂಡ್ ಹಿಂದೆಂದ ಅಳಿಯನೂ ಹೋತ್.

****

# 8. ಬೆದ್‌ರ್ ಗುತ್ತಿ



ಒಂದು ಶತಮಾನಗಳ ಹಿಂದೆ ಹೋದರೆ, ಅಂದ್‌ನ ಜನಗಳೇ ಮುಗ್ದರ್. ನಂಬಿಕೆ–ವಿಶ್ವಾಸಕ್ಕೆ ತನ್ನ ಜೀವನನ್ನೇ ಕೊಡುತ್ತಿದ್ದೊ. ಹೇಳ್ದ ಮಾತ್ ಹೇಳ್ದಾಂಗೆ. ಹಿರಿಯೊವು ತೇಳಿರೆ ಅಷ್ಟೇ ಗೌರವ ಆದರಗಳ ಕೊಡ್ತಿದ್ದೊ. ಮಕ್ಕಳಿಗೆ ಮೊದ್ವೆ ಮಾಡೋಕಾದರೆ ಅಯ್ಯೆ–ಅಪ್ಪನೇ ಗೂಡೆ–ಹೈದ ನೋಡ್ತಿದ್ದೊ. ಆಗನ ಹುಡ್ಗರೊಟ್ಟಿಗೆ ಮದುವೆ ಆಗುವ ಪ್ರಾಯ ಬಾಕನ ಎಲ್ಲಿಯಾರ್ ಗೂಡೆ ನೋಡ್ಯಳಾಂತ ಕೇಳಿರೆ. ಗೊತ್ತಿಲ್ಲೆ ಅಪ್ಪ ನೋಡಿ ಹೇಳಕಷ್ಟೆಂತ, ಅಷ್ಟೇ ಮುಗ್ಧವಾಗಿ ಹೇಳ್ತಿದ್ದೊ. ಗೂಡೆಗಳೊಟ್ಟಿಗೆ ಹುಡ್ಗ ಎಲ್ಲಿಯಾರೂ ನೋಡ್ಯಳನಾಂತ ಕೇಳಿರೆ, ಇಲ್ಲೆಪ್ಪಾ ಅಪ್ಪ–ಅಯ್ಯೆ ನೋಡಿ ಹೇಳ್ದವನೊಟ್ಟಿಗೆ ಮೊದ್ವೆ ಆದುಂತ ಹೇಳ್ತಿದ್ದೊ. ಹೈದ ಗೂಡೆನ ಆಗಲಿ, ಗೂಡೆ ಹೈದನ ಆಗಲಿ ಸರಿ ನೋಡುದಿದ್ದರೆ ಅದ್ ಮೊದ್ವೆ ಕಳ್ದ್ ಒಂದು ನಾಲ್ಕೈದ್ ದಿನ ಆಗಿರೋಕು. ಈಗ ಕಾಲ ಹೇಂಗುಟ್ಟುಂತ ನಾವ್ಗೆಲ್ಲಾ ಗೊತ್ತುಟ್ಟು. ಗೂಡೆ–ಹೈದ ಒಬಂದೊಬ್ಬ ನಿಘಂಟ್ ಆದ ಮೇಲೆ ಅಯ್ಯೆ–ಅಪ್ಪನೊಟ್ಟಿಗೆ ಹೇಳುವೊ. ಅಯ್ಯೆ–ಅಪ್ಪ ಮರ್ಯಾದೆ ಒಳೆಕುತಾದರೆ ಒಪ್ಪಿ ಮೊದ್ವೆಗೆ ತಯಾರು ಮಾಡೊಕು.

ಅದೆಲ್ಲ ಇರ್‍ಲಿ. ಈಗ ಹಳೇ ಕಾಲದ ಒಂದು ಕಥೆನ ಹೇಳ್ತ ಒಳೆ. ಒಬ್ಬ ಒಂದು ಗೂಡೆನ ಮೊದ್ವೆ ಆಗಿ ಒಂದೆರಡು ವರ್ಷ ಆಗುಟು. ಆಗನ ಕಾಲಲಿ ಹೆಣ್ಣ್ ತವರಿಗೆ ಹೋದರೆ ಕಮ್ಮಿ ತೇಳಿರೂ ಹತ್ತ್‌ದಿನ ಬಾಕಿಲೆ. ಹಾಂಗೆ ಮೇಗಡೆ ಮನೆನ ಜಾನಕಿ, ಅವಳ ತವರಿಗೆ ಹೋಗಿ ಹತ್ತ್ ದಿನ ಕಳ್ತ್. ಗಂಡ ಮೋನಪ್ಪ ಹೆಣ್ಣ್‌ನ ಕರ್ಕಂಡ್ ಬರೋಕುಂತ ಹೆಣ್ಣ್‌ನ ಮನೆಗೆ ಹೊರ್‍ಟತ್. ಏನಿದ್ದರೂ ಹೆಣ್ಣ್‌ನ ಮನೆಗೆ ಇವನ ಮನೆಂದ 10–12 ಮೈಲಿ ದೂರ ಆದು. ಬೊಳ್ಪಿಗೆ ಬೇಗ ಎದ್ದ್ ಅಯ್ಯೆನೊಟ್ಟಿಗೆ ಗಂಜಿ ಎಲ್ಲ ಮಾಡಿಕೆ ಹೇಳಿ, ಗಂಜಿ ಬೇಯುವ ಹೊತ್ತಿಗೆ ಇಂವ ಹಟ್ಟಿಗೆ ಹೋಗಿ ದನಗಳ ಕುತ್ತಿಗೆಗೆ ಮೆಂಟೆ ಎಲ್ಲ ಕಟ್ಟಿ ಕಾಡಿಗೆ ಹೊಡ್ತ್.

ಒಮ್ಮೆನ ಗದ್ದೆ ಕೆಲ್ಸ ಎಲ್ಲ ಆದರ್‌ಂದ ಹೆಣ್ಣ್‌ನೂ ತವರಿಗೆ ಹೋದ್. ಎತ್ತ್‌ಗಳಿಗೂ ಈಗ ಕೆಲ್ಸ ಇಲ್ಲೆ. ಹಾಂಗಾಗಿ ಕಾಡಿಗೆ ಹೊಡ್ತ್. ಸಣ್ಣ ಕರ್‌ಗಳ ತಕ್ಕಂಡ್ ಹೋಗಿ ಅಡ್ಡ ಬೊಳ್ಳಿ ಹಾಕಿ ಮೇಯಕೆ ಕಟ್ಟಿತ್. ಬಂದ್ ಕೈಕಾಲ್ ತೊಳ್ದ್ ಗಂಜಿಗೆ ಮೊಸರ್ ಹಾಕಿ, ಸೊಂತೆಕಾಯಿ–ಹಲಸಿನಕ್ಕಿ ಗೈಪುಲಿ ಉಂಡತ್. ಬೇಗ ಬೇಗ ಮುಂಡುನ ಕಟ್ಟಿಕಂಡ್ ಮೇಲೊಂದು ನೀಲಿ ಕುಡ್ತ ಹಾಕಡಂತ್. ಹೆಗ್‌ಲಿಗೆ ಪಟ್ಟೆ ಪಟ್ಟೆ ಇದ್ದ ಬೈರಾಸ್‌ನ ಹಾಕಂಡ್, ದೊಡ್ಡ ಬೆತ್ತದ ಕೊಡೆ ಹಿಡ್ಕಂಡ್, ಎಲೆ ಅಡಿಕೆ ಗುತ್ತಿನನೂ, ಬೀಸ್‌ಕತ್ತಿನೂ ಖಾಕಿ ಚೀಲಕ್ಕೆ ತುಂಬಿಸಿಕಂಡ್ ಅಯ್ಯೆನೊಟ್ಟಿಗೆ ಹೇಳಿ ಹೊರ್ಟತ್. ನಾಳೆ ಬೊಳ್ಪಿಗೆ ಆದಷ್ಟ್ ಬೇಗ ಹೊರ್ಟವೆ ಅವ್ವಂತ ಹೇಳಿ, ಗದ್ದೆ ಹಕ್ಕಲೆ ಹೋದ ಅಪ್ಪನೊಟ್ಟಿಗೆ ಹೇಳ್ ಬಲಾಂತ ಹೇಳಿ ಹೊರ್ಟತ್.

ಮನೆ ಎದ್‌ರ್‌ನ ಕಟ್ಟಪುಣಿಲಿ ಹೋಗಿ, ಗದ್ದೆ ತಲೇನ ತಡಮೆ ದಾಟಿ ಕಾಡ್ ದಾರಿ ಸೇರ್ತ್. ಹನಿ–ಹನಿ ಮಳೆನೂ ಶುರು ಆದರ್‌ಂದ ಮುಂಡುನ ಮುಕ್ಕಲ್ ಮಾಡಿ ಕಟ್ಟಿಕಂಡತ್. ಈ ಸತ್ತ ಉಂಬುಳುಗಳ್‌ಂದ ಜಾಗೃತೆ ಬೇಕಂತ ಕಾಲ್ ನೋಡಿಕಂಡ್ ನೋಡಿಕಂಡ್ ನಡೀತಾ ಇತ್ತ್. ಹೋಗಿ ಹೋಗಿ ಒಂದು ಏಳೆಂಟ್ ಮೈಲ್ ದಾಟಿಕನ ಒಂದು ದೊಡ್ಡ ಹಳ್ಳ ಸಿಕ್ಕಿದೆ. ಅದ್ಕೆ ಮುಂದೆ ಕಾಡ್ ಒಳಗೆ ಸಣ್ಣ –ಸಣ್ಣ ಚೋಡಿಗ ಐದಾರ್ ಸಿಕ್ಕುವೆ. ಅಲ್ಲೆಲ್ಲಾ ದಾಟಿ ಕಂಡ್, ಕೈಕಾಲ್ ತೊಳ್ಕಂಡ್ ಮುಂದೆ ಹೋದ ಮೋನಪ್ಪ ಈ ಹಳ್ಳದ ಕರೇಲಿ ಹನಿಸ್ ಕುದ್ರಮೊನೊಂತ ಯೋಚಿಸಿ ಒಂದು ದೊಡ್ಡ ಗುಂಫಕಲ್ಲ್ ಮೇಲೆ ಹತ್ತಿತ್. ಹಞ ಬೆಚ್ಚಂಗಿದ್ದ ಜಾಗೆಲಿ ಎರಡ್ ಮೂರು ಹಿಂಟೆಞ ಸೊಪ್ಪುನ ಮುರ್ದ್, ಕಲ್ಲ್ ಮೇಲೆ ಹಾಕಿ ಕುದ್ದತ್. ಹೆಣ್ಣ್ ತವರ್‌ಲಿ ಬೊಳ್ಪುಂದಳೇ ದಾರಿ ಕಾಯೋತ್ತಿರ್ದ್ದಂತ ಮನ್ಸ್‌ಲಿ ಬಾತ್. ಪಾಪ ಈ ಗದ್ದೆ ಬೇಸಾಯ, ಸೊಪ್ಪು–ಸೌದೆಂತೇಳಿ ಅದ್ಕೆ ಒಂದುಗಳಿಗೆ ಪುರುಸೊತ್ತ್ ಇಲ್ಲೆ. ಆದರೂ ಒಂದು ಚೂರು ಕೋಪ–ತಾಪ ಮಾಡದೆ ಅವ್ವನೊಟ್ಟಿಗೆ ಹೊಂದಾಣಿಕೆಲಿ ಬೊದ್ಕಿದೆ. ಬಹುಶ: ಇದ್ ನಾ ಮಾಡ್ದ ಪುಣ್ಯ ಅಲ್ಲ ನನ್ನ ಅಯ್ಯೆ–ಅಪ್ಪ ಮಾಡ್ದ ಪುಣ್ಯಂತ ಅನ್ಸಿದೆ. ನಮ್ಮ ಅವ್ವಂಗೂ ಸೊಸೆ ತೇಳಿರೆ ತುಂಬಾ ಪ್ರೀತಿ. ನನ್ನ ಸ್ವಂತ ಮಗಳಾಂಗೆ ನೋಡ್ತಾ ಒಳೊ. ಇವಳ್ ತವರಿಗೆ ಹೋಗಿ ಮೂರು–ನಾಲ್ಕ್ ದಿನಂದಳೇ ಶುರು ಮಾಡಿಟು. ಹೋಗುನೆ ಹೈದ , ಗೂಡೆನ ಕರ್ಕಂಡ್ ಬಾ ..ಂತ. ನಾನೇ ಎರಡ್ ದಿನ ಇರ್ಲಿಂತ ಸುಮ್ಮನಾದ್. ಅದ್ ಹೇಂಗೂ ಸಣ್ಣದಲ್ರಿ ಓಡಾಡಿಕಂಡಿದ್ದ ಕುಟುಂಬದ ಮನೆಗಳಿಗೆ, ಮತ್ತೆ ಐನ್ ಮನೆಗೆಲ್ಲ ಹೋಗಿ ಬರ್ಲಿಂತ ನನ್ನ ಮನ್ಸ್‌ಲಿ ಇತ್. ಹೀಂಗೆ ಯೋಚನೆ ಮಾಡಿಕಂಡ್ ಚೀಲಲಿದ್ದ ಎಲೆ ಅಡಿಕೆ ತುಂಬಿಸಿದ ಬೆದ್‌ರ್ ಗುತ್ತಿಗೆ ಕೈ ಹಾಕಿತ್. ಹಳೇ ಬೆದ್‌ರ್‌ಗುತ್ತಿ ಮೊನ್ನೆ ಮೊನ್ನೆ ಒಡ್ದ್ ಹೋದದಕ್ಕೆ ಹೊಸ ಗುತ್ತಿ ಮಾಡ್ದ್. ಹನಿಸ್ ಕೈ ಹೋಕೆ ಭಂಗ ಆದೆಂತ ಕೈನ ಬಲವಾಗಿ ಹುಗಿಸಿ, ಅದ್ಕೆ

ಹೋಳ್‌ನ ಎಲೆನ ಎಡೆಂದ ಬೆರ್‍ಲ್‌ಲಿ ಹೆರ್ಕಿ ಕೈ ತೆಗ್ಯಕೆ ನೋಡ್ತ್. ಉಹೂಂ ಕೈ ಬಾದುಲೆ. ಅಯ್ಯೋ ಇದೆಂತ ಕರ್ಮಂತ ಕೈನ ಬಲವಾಗಿ ಎಲ್ಯಕೆ ನೋಡ್ತ್. ಏನೇನೂ ಮಾಡಿರೂ ಕೈ ಬಾದುಲೆ. ಅಯ್ಯನ ಬಂಡೆ ಏನ್ ಮಾಡ್ದುಂತ ತಲೇಗೆ ಹೋತ್‌ಲೆ. ಎಡ್ಡ ಕೈಲಿ ಚೇಲನ ಹೆಗಲಿಲಿ ಕೋಸಿಕಂಡ್, ಹೆಗಲ್‌ಲಿ ಇದ್ದ ಬೈರಾಸ್‌ನ ಈ ಗುತ್ತಿ ಕಾಣದಾಂಗೆ ಬಲ್‌ದ ಹೆಗಲಿಗೆ ಹಾಕಿ ಚಪ್ಪೆ ಮೋರೆ ಮಾಡಿಕಂಡ್ ಹೆಣ್ಣ್‌ನ ಮನೆ ಕಡೆ ಹೊರ್ಟತ್.

ಇನ್ನ್ ಇಲ್ಲಿ ಹೆಚ್ಚಿಗೆ ಕುದ್ದರೆ ಮನೆಗೆತ್ತ್‌ಕನ ಕತ್ತಲಾದೆಂತ ಬೇಗ ಬೇಗ ಹೆಜ್ಜೆ ಹಾಕಿತ್. ಓ . ದೂರಲಿ ಅತ್ತೆ–ಮಾವನ ಮನೆ ಕಂಡದೆ. ನಾ ಗದ್ದೆ ಪುಣಿಲಿ ಹೋದರ ದೂರಂದಳೇ ಹೆಣ್ಣ್ ನೋಡ್ತ್. ಅಯ್ಯೆಗೆ ಹೇಳ್ತ್ ಕಂಡದೆ. ಅತ್ತೆ ಸೀದಾ ಹೋಗಿ ಕಂಚಿನ ಗಿಂಡಿ ಚೊಂಬುಲಿ ನೀರ್ ತಂದೊ. ಮನೆಗೆ ಹತ್ತಿದಾಂಗೆ ಹಳೇ ಪದ್ಧತಿ ಪ್ರಕಾರ ಅವನ ಮುಂದೆ ನೀರ್ ಹಿಡ್ದ. ಏನ್ ಅಣ್ಣಾಂತ ಕೇಳ್ದೊ. ಒಳ್ಳೆದ್ ಅತ್ತೆಂತ ಹೇಳಿ  ಎಡಕೈಲಿ ನೀರ್ ತಕ್ಕಣ್ ಒಳಗಿನ ಐ ಮರಲಿ ಕುದ್ದತ್. ಬಾವಂದರ್ ಬಂದ್ ಏನ್ ಬಾವಂತ ಎಲ್ಲ ಕೇಳ್ದೊ. ಹಇ ಹೊತ್ತಿಗೆ ಗದ್ದೆ ಹಕ್ಕಲೆ ಹೋದ ಮಾವನೂ ಬಂದ್ ಏನ್, ಒಳ್ಳೆದ್ ಎಲ್ಲ ಆತ್. ಒಳಗಿಂದ ಜಾನಕಿನೇ ಹೋಗಿ ಕುಡ್ಯಕೆ ಕಣ್ಣ ಚಾನೂ–ಚಾಮೆ ಸಜ್ಜಿಗೆನೂ ತಂದ್ ಕೊಟ್ಟತ್. ಹಾಂಗೆ ನೀರ್ ತಂದ್ ಕೈ ತೊಳ್ಯಣಿಂತ ಹೇಳ್ತ್. ಇಲ್ಲೆ ನಾ ಹಳ್ಳ ದಾಟಿ ಬಾಕನ ಕೈ ಕಾಲ್ ಎಲ್ಲ ತೊಳ್ದಳೆ. ಬೇಡಂತ ಹೇಳಿ ಬರೀ ಚಾನ ಎಡ್ಡ ಕೈಲಿ ತಕ್ಕಂಡ್ ಕುಡ್ತ್. ಅಳಿಯ ಯಾಗೋಳ್‌ನಾಗೆ ಗೆಲುವು ಇಲ್ಲೆ ಯಾಕೆಂತ ಅತ್ತೆ ಯೋಚನೆ ಮಾಡ್ತ್. ಪಾಪ ಬೊಳ್ಪುಂದಳೇ ನಡ್ದ್ ಬೊಚ್ಚಿರೋಕುಂತ ಸುಮ್ಮನಾತ್. ಕತ್ತಲೆ ಆತ್ ಬಾವಂದರ್ ಎಲೆ ಅಡಿಕೆ ತಂದ್ ಕೊಟ್ಟರೂ ತಿಂತಿಲೆ. ಸಣ್ಣ ಬಾವ ಬಂದ್ ಬನ್ನಿ ಬಾವ, ನೀರಡಿಗೆ ಮಿಯಾಕೆ ಪೋಯಿ ಬೊಳ್ಪೊಂದಳೇ ನಡ್ದ್ ಬಂದ್ ಬೊಚ್ಚಿರೋಕು. ಕೈ–ಕಾಲಿಗೆಲ್ಲ ಬಿಸಿ–ಬಿಸಿ ನೀರ್ ಹೊಯ್ಕಣಿಂತ ಕರ್ತ್. ಆದರೆ ಮೋನಪ್ಪ ಮಾತ್ರ ಇಲ್ಲೆ ಬಾವ ನಾ ಮಿಯೋದುಲೆ ನಾ ಮನೇಲಿ ಬೊಳ್ಪಿಗೆ ಹೊರ್ಡಿಕೆ ಮುಂದೆ ಬಿಸಿ–ಬಿಸಿ ಮಿದ್ ಬಂದದ್. ಮತ್ತೆ ಈಗ ಮಳೆಗಾಲ ಆದರ್‌ಂದ ಬೆವರು ಏನೂ ಇಲ್ಲೆ. ನೀವು ಮೀಕಣಿ, ನಾ ಬಾದುಲೆಂತ ಅಲ್ಲೆ ಕುದ್ದೊ . ಮಾವ–ಅತ್ತೆ ಎಲ್ಲಾ ಅವರ ಮನೆ ಕಡೆ ಬೇಸಾಯ ಕೆಲ್ಸ, ಕಾಡಿಗೆ ಹೋದ ಸಂಗತಿ ಎಲ್ಲ ಮಾತಾದ್ದೊ. ಅಂತೂ ಇಂತೂ ಮನೆವೆಲ್ಲ ಮಿದ್ ಆತ್. ಇಂವಂಗೆ ಈ ಬೆದ್‌ರ್ ಗುತ್ತಿನೇ ತಲೇಲಿ ಕೊರಿತಾ ಉಟ್ಟು. ಒಂದು ಕಡೆ ಹೆಣ್ಣ್ ಯೋಚನೆ ಮಾಡ್ತ ಉಟ್ಟು. ಇವುಕೆ ಇಂದ್ ಏನಾಗುಟು. ಬಾರೀ ಮಂಡೆ ಬೆಚ್ಚಲಿ ಒಳಲ್ಲ . ಬಾವಂದರೊಟ್ಟಿಗೂ ದೊಡ್ಡ ಕುಶಲ್ ಇಲ್ಲೆ. ಯಾಕೆಂತ ಮನ್ಸ್‌ಲಿ ಕೊರಿತಾ ಉಟ್ಟು.

ಎಲ್ಲವೂ ಮಿದ್ ಆದ ಮೇಲೆ ಅಳಿಯ ಬಂದದೆಂತ ಮುಂದೇನೇ ಗೊತ್ತಿದ್ದದರ್‌ಂದ ಕೋಳಿ ಗೈಪು–ಪೊಕ್ಕುಳ ರೊಟ್ಟಿ ಎಲ್ಲ ರೆಡಿ ಆಗುಟ್ಟು. ಅತ್ತೆ

ಚೊಂಬುಲಿ ನೀರ್ ತಂದ್ ಅಣ್ಣ ಉಂಬಕೆ ಎದ್ರಿಂತ ನೀರ್ ಕೊಟ್ಟೊ. ಅಳಿಯ ಕೈಲಿ ತಕ್ಕಂಣದೆ ಅಲ್ಲೆ ಇಸಿ ಅತ್ತೆ. ನಾ ಉಂಬೊದುಲೆ. ಎಂತಂತ ಗೊತ್ಲೆ, ಬೊಳ್ಪಿಗೆ ಹಳಾ ಗಂಜಿಗೆ ಮೊಸರ್ ಹಾಕಿ ಸೋಂತೆಕಾಯಿ – ಹಲಸಿನಕ್ಕಿ ಗೈಪುಲಿ ಉಂಡದ್ ಗೊತ್ತುಟ್ಟು. ಆಮೇಲೆ ಹೊಟ್ಟೆನೇ ಸರಿ ಇಲ್ಲೆ. ದಾರಿಲಿ ಬಾಕನ ಎರಡ್–ಮೂರು ಸರ್ತಿ ಚೋಡಿಗೆ ಕುದ್ದ್ ಬಂದದ್. ಹಾಂಗಾಗಿ ನಾ ಉಂಬೊದುಲೆಂತ ಹೇಳ್ತ್. ಈಗ ಮಾತ್ರ ಎಲ್ಲವುಕೂ ಕಸಕ್ಂತ ಆತ್. ಯೇ ಅದ್ ಹೇಂಗಾದೆ ನೀವು ಉಣದಿದ್ದರೆ ಮತ್ತೆ ನಾವ್ಗೆ ಉಂಬಕೆ ಆದೆನಾಂತ ಮಾವ–ಬಾವಂದರ್ ಎಲ್ಲಾ ಹೇಳ್ದೊ. ಅಳಿಯಾ ಮಾತ್ರ ದಮ್ಮಯ್ಯ ನನ್ನ ಒತ್ತಾಯ ಮಾಡ್ಬಡಿ. ನನ್ನ ಹೊಟ್ಟೆ ಎಲ್ಲಿಯಾರ್ ಬೊಳ್ಪಿಗೆ ಸರಿ ಆದರೆ ತಿಂಬೆ. ನೀವು ಯಾರು ಕೂಡಾ ಬೇಜರ ಮಾಡಿಕೆ ಬೊತ್ತ್ಂತ ಹೇಳ್ತ್. ಇನ್ನೇನ್ ಮಾಡ್ದುಂತ ಮನೇವು ಹೊಟ್ಟೆ ಇಸುದಕೆ ತಕ್ಕ ಹಳಾ ಹಳಾ ಹುಗ್ಗೆ ಉಂಡೊ. ರೊಟ್ಟಿ ಮಾತ್ರ ಯಾರೂ ತಿಂತಿಲ್ಲೆ. ಹೆಣ್ಣ್ ಜಾನಕಿ ಮಾತ್ರ ಮರ್ಟ್ಕಂಡ್, ಅವು ಉಣದ ಮೇಲೆ ನಂಗೂ ಬೇಡಂತ ಬರೀ ಅರ್ಧ ಚೊಂಬು ನೀರ್ ಕುಡ್ದ್ ಮಲ್ಗಿಕೆ ಕೊಂಬರೆಗೆ ರೆಡಿ ಮಾಡಿಕೆ ಹೋತ್.

ಇಲ್ಲೆ ನನ್ನ ಅಳಿಯಾ ಮೊದ್ವೆ ಆಗಿ ಎರಡ್ ವರ್ಷ ಆದರೂ ಹೀಂಗೆ ಮಾಡ್ದಂವ ಅಲ್ಲ. ಏನೋ ಒಂದು ಕಾರಣ ಉಟ್ಟು. ಏನಿದ್ದರೂ ಮಲ್ಗಿಕಾಕನ ಹೆಣ್ಣ್‌ನೊಟ್ಟಿಗೆ ಹೇಳದಿರಿಕಿಲೆಂತ ಒಂದು ಪ್ಲಾನ್ ಮಾಡ್ತ್. ಮಗಳ್ ಮಲ್ಲಿಕೆಲ್ಲ ರೆಡಿ ಮಾಡಿ ಹೊರಗೆ ಬಾಕನ ಅಯ್ಯೆ ಮೆಲ್ಲ ಕೊಂಬರೆಗೆ ಹೊಕ್ಕ್ ಬಾಗ್‌ಲ್ ಮೂಲೆಲಿ ಅಡಂಗಿ ನಿತ್ತ್ತ್. ಗಂಡನೂ ಹೆಣ್ಣ್‌ನೂ ಇಬ್ಬರ್ ಬಂದ್ ಮಲ್ಗಿಕೆಂತ ಮೊಂದ್ರಿಲಿ ಕುದ್ದೊ. ಅತ್ತೆ ಅವ್ಕೆ ಕಾಣದಾಂಗೆ ಚೆದ್ದಲೆ ಬಾಗ್‌ಲ್ ಅಡ್ಡ ನಿತ್ತ್‌ಕಾಂತ್. ಅವರ ಮನೆ ತೇಳಿರೆ ದೂರ ದೂರ ಸಿಲುವೆ ಕಂಬಗಳ ಹಾಕಿ ಅದ್ಕೆ ಚೆದ್ದಲೆ ಕಟ್ಟ ರೂಮ್‌ನಾಂಗೆ ಮಾಡ್ದ ಮನೆ. ಮಾಡಿಗೆ ಹುಲ್ಲು ಹಾಕಿ ಬೆಚ್ಚಂಗೆ ಇರುವ ಮನೆ.

ಹೆಣ್ಣ್ ಮರ್ಟ್ಕಂಡ್ ಕೇಳ್ತ್; ಅಲ್ಲ ನೀವ್ಗೆ ಏನ್ ಆಗುಟುಯಾ? ಬಂದಾಂಗೆ ಅವ್ವ ನೀರ್ ಕೊಟ್ಟದರ ತಕ್ಕಂಡತ್ತಿಲ್ಲೆ. ನಾ ಚಾ ಕೊಟ್ಟದರ ಮಾತ್ರ ಕುಡ್ದ್ ಸಜ್ಜಿಗೆ ತೀಂತಿಲ್ಲೆ. ಮಿಾತ್‌ಲೆ, ಉಂಡತ್ಲೆ. ನೀವ್ಗೆ ಎಂತ ಆಗುಟು ಹೇಳಿ. ನನ್ನೊಟ್ಟಿಗೆ ಹೇಳಿಂತ ಒತ್ತಾಯ ಮಾಡ್ತ್. ಆಗ ಮೋನಪ್ಪ ಕೈಗೆ ಹಾಕಿದ ಬೈರಾಸ್‌ನ ತೋರ್ಸಿ ನಡ್ದ ಕಥೆನ ಎಲ್ಲಾ ಹೇಳ್ತ್. ಇದರ ನೋಡಿ ಹೆಣ್ಣ್‌ಗೆ ಸಿಟ್ಟ್ ಬಾತ್. ನೀವು ಎಂತ ಮೊನ್ಸ? ಇದರ ಆಗಳೇ ಹೇಳಿದರೆ ಅಣ್ಣಂದರ್ ಒಡ್ಯಕಿತ್ತಿಲೆನಾ? ಇಲ್ಲದಿದ್ದರೆ ಅಲ್ಲೆ ಹಳ್ಳದ ಕರೇಲಿದ್ದ ಗುಂಪ ಕಲ್ಲಿಗೆ ಹೊಡ್ದರೆ ಹೊಡಿ ಆಕಿತ್ತ್‌ಲೆನಾ? ನೀವೆಂತ ಹೆಡ್ಡ ದೂಮ ?ಂತ ಹೇಳಿ ಹೋಗಿ ಆ ಬಾಗ್‌ಲ್ ಮೂಲೆಲಿದ್ದ ಸಿಲುವೆ ಕಂಬಕ್ಕೆ ಇದರ ಹೊಡಿನಿ. ಅದ್ ಒಡ್ದ್ ಹೋದೆಂತ ತೋರ್ಸಿತ್. ಓ

ಇದ್ ಯಾರಿಗೆ ಗೊತ್ತುಟ್ಟುಂತ ಯೋಚನೆ ಮಾಡಿ, ಇದ್ ನಂಗೆ ಯಾಕೆ ಹೊಳ್ತ್‌ಲೆಂತ ಇಂವ ಬಾಗ್‌ಲ್ ಮೂಲೆಲಿದ್ದ ಕಂಬಕ್ಕೆ ಕೈನ ಹೊಡ್ತ್. ಅಲ್ಲಿಂದ ಅಯ್ಯೊಂತ ಒಂದು ಆರ್ಭಟೆ ಕೇಳ್ತ್. ಅಷ್ಟೊತ್ತಿಗೆ  ಯಾರೋ ಬಿದ್ದ ಸದ್ದ್ ಕೇಳ್ತ್. ಎಲ್ಲವೂ ಓಡಿ ಬಂದ್ ದೀಪ ಹೊತ್ತಿಸಿ ನೋಡಿರೆ ಅತ್ತೆನ ತಲೆಂದ ರಕ್ತ ಹರ್ದದೆ. ಬೆದ್‌ರ್ ಗುತ್ತಿ ಒಡ್ದುಟ್ಟು. ಒಟ್ಟಿಗೆ ಅತ್ತೆನ ತಲೇನೂ ಒಡ್ದುಟ್ಟು. ಅಳಿಯನ ಕಥೆ ಎಂತಂತ ಕೇಳಿಕೆ ಬಾಗಿಲ್ ಮೂಲೆಲಿ ಅತ್ತೆ ನಿತ್ತದ್ ಯಾರಿಗೂ ಗೊತ್ತೇ ಆತ್ಲೆ.

****

# 9. ತಾಳಮದ್ದಳೆ



ಒಂದು ಕುಟುಂಬಲಿ ಮೂರು ಜನ ಅಣ್ಣ ತಮ್ಮಂದರ್ ಬಾರಿ ಪ್ರೀತಿಲಿ, ಹೊಂದಾಣಿಕೆಲಿ ಬದ್ಕಿಕಂಡ್ ಇದ್ದೊ. ನೋಡೋವುಕೆ ಅವು ಅಣ್ಣ-ತಮ್ಮಂದರ ಅಲ್ಲ; ಬಾವ ನಣ್ಣಂದರಾಂಗೆ ಕಾಂಬೊತ್ತಿದ್ದೊ. ಅಯ್ಯೆ-ಅಪ್ಪ ಮಾಡಿಸಿದ ಭೂಮಿ-ಜಮ್ಮಲಿ ಕೆಲ್ಸ ಮಾಡ್ದು, ಹೆಚ್ಚಾಗಿ ಬೇಸಾಯನೇ ಆಗ ದೊಡ್ಡ ಕೆಲ್ಸ ಆದರ್‌ಂದ, ಬೇಸಾಯ ಎಲ್ಲ ಮುಗ್ದ ಮೇಲೆ ನಾಯಿ ಕರ್ಕಂಡ್ ಕಾಡಿಗೋದು ಇವರ ದಿನಚರಿ. ದಿನಕ್ಕೆ ಒಂದೆರಡ್ ಕಟ್ಟ ಸೊಪ್ಪು ಮಾಡಿ ಹಟ್ಟಿ ಕರೇಲಿ ಹೊತ್ತ್ ಹಾಕಿರೆ; ಇನ್ನ್ ನಾಳೆಗಿದ್ದದ್ ನಾಳೆನೇ ಮಾಡುವೊ. ಅಣ್ಣ-ತಮ್ಮಂದರ್ ಎರಡೆರಡ್ ವರ್ಷಕ್ಕೆ ಸಣ್ಣವು ಆಗಿದ್ದೊ. ಶುರುಗೆ ಎರಡ್ ಜನ ಅಕ್ಕಂದರ ಮದುವೆ ಮಾಡಿ ಮುಂದೆನೇ ಕೊಟ್ಟೊಳೊ.

ಆಗನ ಕಾಲಲಿ ಮನೋರಂಜನೆ ತೇಳಿ ಈಗನಾಂಗೆ ಪಿಚ್ಚರ್, ಡ್ಯಾನ್ಸ್, ನಾಟಕಾಂತ ಬಾರೀ ಕಮ್ಮಿ ಇತ್ತ್. ಇದ್ದರೂ ಅದ್ ನಡೆವಲ್ಲಿಗೆ ಹತ್ತಾರ್ ಮೈಲ್ ನಡ್ದೇ, ಹೋಕಿತ್. ಈಗಾದರೂ ದಿನಾಲೂ ಸಮಯ ಕಳೆಕೆ ಮನೇಲಿ ಟಿ.ವಿ. ಇರ್ದರ್‌ಂದ ಲೋಕಲಿ ನಡ್ದದೆಲ್ಲ ಒಂದು ಕ್ಷಣಲಿ ಗೊತ್ತಾದೆ. ಆಗ ಮನೆಗಳ್ಲಿ ಅಲ್ಲೊ-ಇಲ್ಲೊ ಒಂದೊಂದು ರೇಡಿಯೋ ಇರ್ತಿತ್ತ್. ಅದರ ಅವರ ಮನೇಲಿ ದೂರಂದ ನೋಡಕಿತ್ತ್. ಹಕ್ಕಲೆ ಹೋಗುವಾಂಗೆ ಇಲ್ಲೆ. ಮುಟ್ಟುವಾಂಗೆ ಇಲ್ಲೆ. ಅದ್ಕೆ ಮರದ ಪೆಟ್ಟಿಗೆ ಮಾಡಿ ಅದರೊಳಗೆ ಇಸುತ್ತಿದ್ದೊ. ಆಗ ರೇಡಿಯೋ ತೆಗೆವಾಂಗೆ ಲೈಸನ್ಸ್ ಕೂಡಾ ಬೇಕಿತ್ತ್. ಇದೆಲ್ಲ ಆಗ ಗಟ್ಟಿಮುಟ್ಟು ಕುಲದೊವುಕೆ ಮಾತ್ರ ಸಾಧ್ಯ ಆಗ್ತಿತ್.

ಇನ್ನೇನ್ ಮಾಡ್ದು.. ಹಳ್ಳಿಲಿರೋವು ಹನಿಸ್ ಶಾಲೆಗೆ ಹೋದೋವು, ಇಲ್ಲರೆ ಆಗಾಗ ಯಕ್ಷಗಾನ ನೋಡುವ ಹುಚ್ಚು ಇರೋವು ಸೇರಿಕಂಡ್ ತಾಳ

ಮದ್ದಳೆಂತ ಮಾಡ್ತಿದ್ದೊ. ಈಗಲೂ ತಾಳಮದ್ದಳೆ ಪೂರ್ತಿ ನಶಿಸಿ ಹೋಗದೇ ಇರ್ದರ್‌ಂದ ಅದರ ಬಗ್ಗೆ ನಾ ಹೆಚ್ಚಿಗೆ ಹೇಳೋಕುಂತ ಇಲ್ಲೆ. ಆಗನ ಕಾಲಲಿ ಹೆಚ್ಚಾಗಿ ಪುರಾಣ ಕಥೆಗಳನ್ನೇ ತಾಳಮದ್ದಳೆಗೆ ಆಯ್ಕೆ ಮಾಡಿಕಾಂತಿದ್ದೊ. ಈಗನಾಂಗೆ ಸಾಮಾಜಿಕ ಕಥೆಗ, ಪಿಚ್ಚರ್‌ನ ಕಥೆಗಳೆಲ್ಲಾ ಮಾಡ್ತಿತ್ತಿಲೆ.

ಹೀಂಗೆ ಒಂದು ದಿನ ಈ ಮೂರು ಜನ ಕೂಡಾ ತಾಳ ಮದ್ದಳೆಲಿ ಪಾತ್ರಗಳ  ವಹಿಸಿದೊ. ಪದ್ಯ ಹೇಳಿಕೆ ಮುಂದೆನೇ ಗೊತ್ತಿದ್ದ ಆ ಊರ್‌ನ ಸುಬ್ಬಯ್ಯ ಮಾಸ್ಟ್ರ ಬಂದಿದ್ದೊ. ತಬಲ ನುಡ್ಸಿಕೆ ಭಾರೀ ಪರಿಣಿತರಾದ ಮಾಯಿಲಪ್ಪಣ್ಣ ಇದ್ದೊ. ಇನ್ನ್ ಹಾರ್ಮೋನಿಯಂನ ಒಟ್ಟಿಗಿದ್ದ ಕೂಸಪ್ಪಣ್ಣ ಕುದ್ದೊ. ಈ ಮೂರು ಜನ ಅಣ್ಣ–ತಮ್ಮಂದರ್ ಅರ್ಥ ಹೇಳಿಕ್ಕಾಗಿ ಚಕ್ಕಳ–ಪಕ್ಕಳ ಹಾಕಿ ಮೊಂದ್ರಿಲಿ ಕುದ್ದೊಳೊ. ತಾಳಮದ್ದಳೆಗೆ ರಾಮಾಯಣದ ಒಂದು ಭಾಗ. ರಾಮ–ಲಕ್ಷ್ಮಣ, ಸೀತೆ ವನವಾಸಕ್ಕಾಗಿ ಕಾಡಿಗೆ ಹೊರ್ಟ ಸನ್ನಿವೇಶ. ತಮ್ಮ ಭರತಂಗೆ ರಾಜ್ಯನ ಒಪ್ಪಿಸಿ, ಇವು ಕಾಡಿಗೆ ಹೋದವೆ. ವನವಾಸ ಜೀವನ ಅನುಭವಿಸುತ್ತಾ ಅನುಭವಿಸುತ್ತಾ ಕಾಡ್‌ಲೀ ಇರುವ ಸಂದರ್ಭ ಒಮ್ಮೆ ಸೀತೆನ ಅಪಹರಣಕ್ಕಾಗಿ ರಾವಣ ಯೋಜನೆ ರೂಪಿಸಿದೆ. ಇದ್ಕೆ ರಾವಣನ ಮಾವ ಕೀಚಕನ ಬಳಸಿಕಂಡ್ ಕೀಚಕ ಮಾಯಾ ಜಿಂಕೆ ಆಗಿ, ಸೀತೆನ ಮುಂದೆ ನೃತ್ಯ ಮಾಡ್ದೆ. ಇದರ ನೋಡಿ ಸೀತೆ ಮರುಳಾಗಿ ರಾಮನೊಟ್ಟಿಗೆ ಹೇಳ್ದೆ. ಪತಿ ದೇವ ಆ ಜಿಂಕೆ ನೋಡು ಎಷ್ಟ್ ಚೆಂದವಾಗಿದೆ. ಅದರ ಸುಂದರವಾದ ಬಣ್ಣಗಳು ನನ್ನನ್ನು ಆಕರ್ಷಿಸುತ್ತಿದೆ. ಅದರ ಮೈ ನೇವರಿಸುವ ಮನಸ್ಸಾಗಿದೆ. ಅದನ್ನು ಹಿಡಿದು ತಾ..... ರಾಮ: ಸೀತೆ ಅದು ನಿಜವಾದ ಜಿಂಕೆ ಇರದು. ನಿನಗದು ಬೇಡ. ಅದು ಯಾವುದೋ ರಾಕ್ಷಸನ ಮಾಯೆ ಇರಬೇಕು. ನೀನು ಅದಕ್ಕೆ ಆಸೆ ಪಡುವುದು ಸರಿಯಲ್ಲ. ಸೀತೆ; ಇಲ್ಲ ರಾಮ. ಅದು ಮಾಯಾ ಜಿಂಕೆ ಅಲ್ಲ. ಎಷ್ಟು ಮುದ್ದಾಗಿ ನನ್ನ ಕಣೆದುರಲ್ಲೇ ನೃತ್ಯ ಮಾಡುತ್ತಿದೆ. ನನಗದು ಬೇಕು. ಹಿಡಿದು ತಾ . ಎಂದು ಹಠ ಹಿಡ್ದದೆ. ಆಗ ಉಪಾಯ ಕಾಣದೆ ರಾಮ ಲಕ್ಷ್ಮಣಂಗೆ ಹೇಳ್ದೆ. ತಮ್ಮ ಲಕ್ಷ್ಮಣ .. ನಾ ಕಾಡಿಗೆ ಹೋಗಿ ಬನ್ನೆ. ನೀ ಅಷ್ಟರ ವರೆಗೆ ಇಲ್ಲೆ ಸೀತೆನಕ್ಕಲೆ ಇರೋಕುಂತ ಹೇಳ್ದೆ. ಆಗ ಲಕ್ಷ್ಮಣ, ಅಣ್ಣಾ ನೀನು ಕಾಡಿಗೆ ಹೋದರೆ ಎಷ್ಟೊತ್ತಿಗೆ ಬರುವಂತ ಕೇಳ್ದೆ. ಅಣ್ಣಂಗೆ ರಾಮಾಯಣ ಮರ್ತ್ ಹೋಗಿ ದಿನಾಲೂ ಇಂವ ಕಾಡಿಗೆ ಹೊರ್ಡಿಕಾಕನ ತಮ್ಮ ಕೇಳುವ ಪ್ರಶ್ನೆ ಇದೇ ಆದ್ರಂದ ' ತಮ್ಮಾ.....' ನಾ ಕಾಡಿಗೆ ಹೋಗಿ ಹೊಳ್ಕೆ ಸಿಕ್ಕಿದ ಕೂಡಲೇ ಬನ್ನೆ. ನೀ ನಾಯಿಗಳ ಬುಡು".

ತಾಳಮದ್ದಳಲಿ ಕುದ್ದ ಪದದೊವು, ಮದ್ದಳೆವು, ಮೋರೆ ಮೋರೆ ನೋಡಿಕಂಡ್ ಪದ ಹೇಳ್ದರ ನಿಲ್ಸುವೆ.

****

# 10. ಮುಡಿ ಹತ್ತ್



ಹಿಂದೆನ ಕಾಲಲಿ ಬೇಸಾಯತೇಳ್ದರ ಮತ್ತೆ ಮತ್ತೆ ಹೇಳುವ ಅಗತ್ಯ ಇಲ್ಲೆಂತ ಕಂಡದೆ. ಗದ್ದೆ ಹೂಡಿ ನೇಜಿ ನೆಟ್ಟ್, ಇಲ್ಲರೆ ಗದ್ದೆ ಬಿತ್ತಿ, ಭತ್ತ ಬೆಳೆಯೋದು ಮುಖ್ಯ ಕಸುಬು. ಆಗನ ಕಾಲಲಿ ತೇಳಿರೆ ಹೆಚ್ಚ್ ಕಮ್ಮಿ 50 ವರ್ಷಗಳ ಹಿಂದೆ ಈಗನಾಂಗೆ 7 ಗಂಟೆಗೆ ಯಾರೂ ಎದ್ದ್‌ರ್‌ತಿತ್ತ್‌ಲೆ. ಬೊಳ್ಪೊಳ್ಪಿಗೆ ತೇಳಿರಿ 4–5 ಗಂಟೆಗೆ ಗಂಡ್‌ಗ–ಹೆಣ್ಮಕ್ಕ ಎಲ್ಲ ಎದ್ದೊ. ಹೆಣ್ಮಕ್ಕ ಒಲೆಂದ ಬೂದಿ ಎತ್ತಿ, ಕಿಚ್ಚಿ ಮೊಟ್ಟರೆ; ಗಂಡ್‌ಗ ಬೇಗ ಎದ್ದ್ ನಿನ್ನೆ ಕತ್ತಲೆಗೆ ದನಂಗಳಿಗೆಂತ ಮಾಡಿ ಇಸಿದ ಮೊಡ್ಡಿನ ಎತ್ತ್‌ಗಳಿಗೆ ತಿಂಬೋಕೆ ಕೊಡುವೊ. ಹೇಂಗಿದ್ದರೂ ಒಂದು ಅರ್ಧ ಗಂಟೆ ಎತ್ತ್‌ಗ ಹಲ್ಸನ ಕಾಯಿ ಮೊಡ್ಡಿನೊ, ಸರ್ಲಿ ಸೊಪ್ಪು ಮೊಡ್ಡಿನೋ ತೇಳಿ ಗಂಜಿನೊಟ್ಟಿ ಬೇಸಿದರ ತಿಂಬೊ. ಅಷ್ಟೊತ್ತಿಗೆ ಮನೆಲಿ ಕಣ್ಣ ಚಾನೂ ರೆಡಿ ಆತಿತ್. ಅದರ ಕುಡ್ದ್ ಗಂಡಸರ್ ನಿನ್ನೆ ಒಳ್ದ ಗಂಜಿಗೆ ನೀರ್ ಹೊಯ್ದ್ ಇಸಿದ ತಣ್ಯಾಣನ, ಇದ್ದರೆ ಮೊಸರ್ ಇಲ್ಲರೆ ಮೊಜ್ಜಿಗೆ ಹಾಕಿ ಹೊಟ್ಟೆ ತುಂಬ ಉಂಬೊ. ಕೆಲವು ಜನ ಅದ್ಕೆ ಮೆಣ್ಸ್ ಕಿಚ್ಚಿ ಹಾಕಿ ಗಂಜಿಗೆ ಚಿರ್ಮಿಬಿ ಉಂಬೊ. ಕೆಲವು ಜನ ನಿನ್ನೆ ಕತ್ತಲೆನ ಗೈಪು ಒಳ್ಳದದರ್ಲಿ ಉಂಬೊ.

ಹೆಣ್ಮಕ್ಕಳೂ ಸುಮ್ಮನೆ ಇರಿಕಿಲೆ. ಬೇಗ ಎದ್ದ್ ಅವು ಮಾಡ್ದ ಕಣ್ಣ ಚಾನ ಕುಡ್ದ್, ಉಂಡರೆ ಉಂಡೊ, ಇಲ್ಲರೆ ಹಾಂಗೇನೆ ಭತ್ತ ಮಿಜ್ಯಕ್ಕೆ ಹಾಕುವೊ. ಅವು ಭತ್ತ ಮಿಜ್ಯಕ್ಕೆ ಶುರು ಮಾಡ್‌ಕಾಕನ ಗಂಡ್‌ಗ ಮಡ್ಡಿ ತಿಂದ ಎತ್ತ್‌ಗಳ ಹೊಡ್ಕಂಡ್ ಹೂಡಿಕೆ ಗದ್ದೆ ಕಡೆಗೆ ಹೋವೊ. ಗದ್ದೇಲಿ ಎತ್ತ್‌ಗಳ ಹೊಡ್ಕಂಡ್, ದನಿ ಕೊಟ್ಟ್‌ಕಂಡ್ ಹೂಡಿಕಾಕನ, ಇತ್ತ ಹೆಣ್ಮಕ್ಕ ಹೂಸ್, ಹೂಸ್, ಇಸ್, ಇಸಾಂತ ಬಾಯಲಿ ಶಬ್ದ ಮಾಡಿಕಂಡ್ ಭತ್ತ ಮಿಜ್ಯವೊ. ಅಹಾ! ಎಂತ ಬದಕ್

ಅದ್. ಹಾಂಗಾಗಿ ಆಗನೊವುಕೆ ಎಂತ ಕಾಯಿಲೆನೂ ಬಾತಿತ್ಲೆ. ಈಗನಾಂಗೆ ವಾಕಿಂಗ್ ಬೇಡ, ಯೋಗ ಬೇಡ.

ಹೀಂಗೆ ಬೇಸಾಯ ಮಾಡಿ ಗದ್ದೇಲಿ ಭತ್ತ ಬೆಳ್ಯೋದರ ನೋಡ್ದೇ ಒಂದು ದೊಡ್ಡ ಹಬ್ಬ. ಗದ್ದೆ ಬೇಸಾಯ ಆಗಿ ಪೈರ್‌ಗ ಎಲ್ಲಾ ನೀರ್‌ಂದ ಮೇಲೆ ಬಾಕ್ಯಾಕನ ಗದ್ದೆ ಹಕ್ಕಲೆ ಹೋದೆ ಒಂದು ಕುಷಿ. ಅಲ್ಲಲ್ಲಿ ಎಸಂಡ್ ಹೊಗುಳು ಮಾಡ್ದರ ಬೊಳ್ಪಿಗೆ ಹೋಗಿ ಗದ್ದೆ ಪುಣಿಗಳ ಒಟ್ಟೆಗಳ ಅಡ್ಪಿ. ನೀರ್ ಗದ್ದೇಲಿ ನಿಲ್ಲುವಾಂಗೆ ಮಾಡುವೊ. ಒಂದು ಸುತ್ತು ಗದ್ದೆಗೆ ಬಾದು ತೇಳಿರೆ, ಆ ಪೈರ್‌ಗಳ ನೋಡಿಕಂಡ್; ಶುದ್ಧ ಗಾಳಿನ ಸೇವನೆ ಮಾಡಿಕಂಡ್ ಬಂದರೆ ಅವಂಗೆ ಬೇರೆ ಎಂತ ಬೇಕು. ಅದ್ ಅನುಭವಿಸಿದವಂಗೇ ಗೊತ್ತು? ಸುಖನ.

ಹೀಂಗೆ ನಮ್ಮ ನೆಂಟ್ರ ಪೈಕಿ ಬಾಬಣ್ಣತೇಳೊವು ಅವರ ಗದ್ದೆ ಬೇಸಾಯ ಎಲ್ಲ ಮಾಡಿ ಲಾಯಿಕ್‌ಲಿ ಭತ್ತ ಬೆಳ್ಸಿದೊ. ಗದ್ದೆ ಬೆಳೆಕಾಕನನೇ ಜಾಲ್ ಎಲ್ಲಾ ರಿಪೇರಿ ಮಾಡಿ, ಹೊಂಡ–ಗುಂಡಿಗಳಿಗೆ ಮೊಣ್ಣ್ ಎಲ್ಲ ಹಾಕಿ, ಗಟ್ಟಮಣೇಲಿ ಹೊಡ್ದ್, ಅದರ ಮೇಲೆ ಸೆಗಣಿ ಗಟ್ಟಿಲಿ ಉಜ್ಜಿ ಲಾಯಿಕ್ ಮಾಡುವೊ. ಒಂದು ಭತ್ತ ಕೂಡ ಹಾಳಾಗದಾಂಗೆ ಜಾಲ್‌ನ ರಿಪೇರಿ ಮಾಡುವೊ. ಬಾಬಣ್ಣನೂ ಜಾಲ್ ಎಲ್ಲ ರಿಪೇರಿ ಮಾಡ್ದೆ ಕಳ್ದ ವರ್ಷ ಕೈಯಿ ಹೊಡ್ದ್ ಇಸಿದ ಪೊಡಿನ ತೆಗ್ದ್ ನೋಡಿರೆ ಅದ್ಕೆ ಸುತ್ತಿದ ಮಾದ್ರಿ ಬೊಳ್ಳಿ ಕರೆಂದ ಎಲ್ಲ ತುಂಡ್ ತುಂಡಾಗಿ ಹೋಗಿತ್ತ್? ಕಾಡ್‌ಗೆ ಹೋಗಿ ಅದ್ಕೆ ಬೇಕಾದ ಮಾದ್ರಿ ಬೊಳ್ಳಿನ ಎಲ್ಲಾ ತಂದ್ ಬಿಸ್‌ಲ್‌ಲಿ ಬಾಡ್ಸಿ ಪೊಡಿನ ಎಲ್ಲಾ ಸರಿ ಮಾಡಿ ಆತ್. ಪೊಡಿ ಇಸಿಕೆ ಜಾಲ್ ನಡುಲಿ ಕಾಟೊಳಿಕೆ ಕಂಬಗಳ ಹುಗ್ದ್ ಆತ್. ಹಗ್‌ಲೆಲ್ಲಾ ಗದ್ದೆ ಕೊಯೊದು ಕತ್ತಲಾಕನ ಅಂದ್‌ಂದ್ –ಅಂದ್‌ಗೆ ಭತ್ತ ಹೊಡ್ಯೊದು. ಇದ್ ಸಾಮಾನ್ಯವಾಗಿ ನಡ್ಕಂಡ್ ಬಾವ ಪದ್ದತಿ.

ಬಾಬಣ್ಣನವರ್‌ದ್ ಹೆಚ್ಚ್ ಕಮ್ಮಿ ಒಂದು ಮೂರು ಮುಡಿ ಬಿತ್ತ್ ಹೋಗುವ ವರ್ಷಲಿ ಎರಡ್ ಬೆಳೆ ತೆಗ್ಯವ ಬಯಲ್ ಗದ್ದೆ. ಏಣೇಲ್‌ಲಿ ಹಳಿ ಮಳೆಗೆ ಕಯಿಮೆ ಕೈಯಿ ಎತ್ತರಕ್ಕೆ ಬೆಳ್ದ್ ಬಿದ್ದ್ ಹೋತಿತ್. ಹೀಂಗೆ ಬಿದ್ದ್ ಕೈಯಿ ಮೇಲೆ ನೊಕ್ಕುಳೆಲ್ಲಾ ಮಣ್ಣ್ ಎಳ್ದ್ ಹಾಕಿ ಕೆಸರ್‌ಲಿ ಮುಳ್ಗ್‌ತಿತ್ತ್, ಅದರ ಮೇಲೆ ಕೊರುಂಗು, ಕೋಳಿ ಸೀತೆ ಹಕ್ಕಿಂತ ಮೆಟ್ಟಿ ಅಷ್ಟ್ ಭತ್ತ ಸಿಕ್ಕ್‌ತ್ತಿತ್ತ್‌ಲೆ. ಅರ್ಧಕರ್ಧ ಚೋಳುಂದ ತೆಗ್ದ್ ಕೊಯೋದು ಕೂಡಾ ಕಷ್ಟ ಆತೀತ್. ಅದರ ಹೊರ್ದ್, ಹೊಡ್ಯೊದು ಎಲ್ಲಾ ಭಂಗನೇ ಆತಿತ್. ಆದರೆ ಸುಗ್ಗಿ ಬೇಸಾಯಲಿ ಅಯ್ಯರೇಟ್, ಜಯಂತ ಒಳ್ಳ ಬೆಳೆ ಬಾತಿತ್. ಕೈಯಿ ಜಾಸ್ತಿ ಎತ್ತರ ಬೆಳೆಯದೆ ಹದಾ ಎತ್ತರ ಬೆಳ್ದ್, ಭತ್ತದ ಕೊರಳ್ ಕೂಡ ಲಾಯಿಕ್ ಇರ್ತಿತ್. ಆ ಸಮಯಲಿ

ಕೊಯಕೆ, ಕೈಯಿ ಹೊರಿಕೆ, ಹೊಡ್ಯಾಕೆ ಎಲ್ಲ ಸುಲಭ. ಕೆಲವು ಸರ್ತಿ ಭತ್ತ ಹೊಡೀತಾ ಇರಿಕಾಕನ ಪೊಡಿಗೆ ಕೂಡಾ ಎತ್ತರ ಆಗಿ ಭತ್ತ ಮುಟ್ಟ್‌ತ್ತಿತ್ತ್. ಹಾಂಗೆ ಭತ್ತದ ರಾಶಿ ಪೊಡಿಗೆ ಮುಟ್ಟಿರೆ ಆಗನ ಕಾಲಲಿ ಪೊಡಿಗೆ ಒಂದ್ ಕಾಯಿ ಒಡೇತಿದ್ದೊ. ಅದು ಕೂಡಾ ಒಂದ್ ಸಂಪ್ರದಾಯ.

ನಮ್ಮ ಬಾಬಣ್ಣಂಗೆ ಆ ವರ್ಷ ಬಾರೀ ಬೆಳೆ ಬಂದಿತ್. ಗದ್ದೇಲಿ ನೋಡಿಕನೇ ಗೊತ್ತಾತಿತ್. ಕೈಯಿ ಏನೂ ಹಾಳಾಗದೆ ಹಂದಿ–ಹೆಗ್ಗಣಂತ ತಿನದೆ ಲಾಯಿಕ್ ಇತ್. ಈ ಸರ್ತಿ ಬಾಬಣ್ಣ ಕೋಳಿಗಳ ಕೂಡಾ ಗದ್ದೆ ಕದರ್ ಹೋದ ಮೇಲೆ ಗೂಡ್‌ಲೇ ಹಾಕಿ ಸಾಂಕಿದ್ದೊ. ಹಿಂಬೋತಾಕನ ಶಾಲೆಂದ ಮಕ್ಕ ಬಂದ ಮೇಲೆ ಅವರ ಗದ್ದೆ ಹಕ್ಕಲೆ ಕಳ್ಸಿ ಗೂಡ್‌ಂದ ಕೋಳಿಗಳ ಬುಡ್ತಿದ್ದೊ. ಮಕ್ಕ ಕತ್ತಲೆ ಮುಟ್ಟ ಕೋಳಿಗಳಿಗೆ ಗದ್ದೆ ಹಕ್ಕಲೆ ಹೋಗದಾಂಗೆ ಪಾರ ಕುದ್ದ್, ಕೋಳಿಗ ಗೂಡ್‌ಗೆ ಕೂಡ್ದ ಮೇಲೆ ಮನೆಗೆ ಬಾತಿದ್ದೊ. ಅಂತೂ ಬಾರೀ ಜಾಗ್ರತೆಲಿ ಅ ವರ್ಷ ಬಾಬಣ್ಣ ಭತ್ತ ಬೆಳ್ಸಿದರ್‌ಂದ ಕೈಯಿ ಕೊಯ್ದ್ ಹೊರೆ ಕಟ್ಟಿರೆ ಅದರ ನೋಡ್ದೇ ಒಂದು ಪೊರ್ಲು. ಚಿನ್ನದ ರಾಶಿನಾಂಗೆ ಅದ್ ಕಾಂಬೊತ್ತಿತ್ತ್. ಕೊಯ್ದ ಕೈಯಿನೆಲ್ಲ ಜಾಲ್‌ಗೆ ಸೇರ್ಸಿ ಆತ್. ಅಂದ್ ಕತ್ತಲೆಗೆ ಐದಾರ್ ಹೆಣ್ಮಕ್ಕ, 3–4 ಗಂಡ್‌ಗ ಸೇರಿಕಂಡ್ ಹಳ ನೋನ್‌ವೆಜ್ ಕಥೆಗಳ ಹೇಳಿಕಂಡ್, ಗೂಡೆಗಳಿಗೂ ಹೈದಂಗಳಿಗೂ ಕುಷಿ ಆಗುವಾಂಗೆ ಕೈಯಿ ಹೊಡ್ಯಕೆ ಶುರು ಮಾಡ್ದೊ. ಹೆಣ್ಮಕ್ಕ ಕಥೆ ಕೇಳ್‌ಕನ ನಾಚಿಕೆ ಆದರೂ ತಲೆಗೆ ಮೋರೆಗೆ ಸೇರ್ಸಿ ಕಟ್ಟಿದ ಸೀರೆ ತುಂಡುಲಿ ಅವರ ಮೋರೆಲಿ ಆಗುವ ಭಾವನೆಗ ಕಾಂಬೊತಿತ್ತ್‌ಲೆ. ಅಂತೂ–ಇಂತು ಹನ್ನೆರಡ್ ಗಂಟೆಗಾಕನ ಕೈಯಿ ಹೊಡ್ದ್ ಆತ್.

ಮಾರನೆ ದಿನ ಭತ್ತನೆಲ್ಲ ಬಿಸಿಲಿಗೆ ಹಾಕಿದೊ. ಜಾಲ್‌ಲಿ ಅರ್ಧಗೇಣ್ ಭತ್ತ ನಿಲ್ಲುವಾಂಗೆ ಫುಲ್ ಆತ್. ಒಂದೇ ದಿನ ಒಣ್ಗಿಕಿಲೆಂತ ಆಗಾಗ ಮೊಗ್ಚಿ ಹಾಕಿ, ಅದರ್‌ಂದ ಬಿಳ್ಗಿಲ್ ತುಂಡುಗಳೆಲ್ಲಾ ಹೆರ್ಕಿ, 3ನೇ ದಿನ ಹಿಂಬೊತಾಕನ ಭತ್ತನ ಗಾಳಿಗೆ ಹೊಡ್ದೊ. ಚೆಟ್ಟೆ ಭತ್ತ ಎಲ್ಲ ಕರೆಗೆ ಬೀತ್. ಒಳ್ಳೆ ಭತ್ತ ಎಲ್ಲ ಒಳಗೆ ಬೀತ್. ಹೀಂಗೆ ಬೇರೆ ಬೇರೆ ಬಿದ್ದ ಭತ್ತನ ಗುಡ್ಸಿ ರಾಶಿ ಮಾಡಿ, ಒಳ್ಳೆ ಭತ್ತನ ಬಾಬು ಅಣ್ಣ ಮುಡಿಲಿ ಅಳ್ತೆ ಮಾಡಿ ಕೊಂಬರಗೆ ತುಂಬಿಸಿಕೆ ಶುರು ಮಾಡ್ದೊ. ಸುಗ್ಗಿ ಭತ್ತಲಿ ಭಾರೀ ಮೊಕ್ಕ್ ಇದ್ದದರ್‌ಂದ ಬಾಬಣ್ಣ, ಸೊಂಟಲಿದ್ದ ತೋರ್ತುನ ಕೂಡಾ ಬಿಚ್ಚಿ ತಲೆಗೆ ಮುಂಡಾಸ್ ಕಟ್ಟಿದೊ. ಸೊಂಟಲಿ ಕರಿ ಪಟ್ಟೆ ನೂಲುಲಿ ಕೋಮಣ ಗಟ್ಟಿ ಆಗಿ ಸಿಕ್ಕಿಸಿ, ಕುಷಿಲಿ ಭತ್ತನ ಅಳ್ತೆ ಮಾಡಿ ಮಾಡಿ ಒಳಗೆ ತಕ್ಕಂಡ್ ಹೋದೊ. ಮುಡಿ ಒಂದೊ .. ಮುಡಿ ಎರಡೋ . ಮುಡಿ ಮೂರೋ .. ಹೀಂಗೆ ಮುಡಿ ಒಂಬತೋ . ಮುಡಿ ಹತ್ತೋ ..ಂತ ಭತ್ತನ ಮುಡಿ ಕುಕ್ಕೆಲಿ ತುಂಬಿಸಿ ನೇಚಿಕಾಕನ ಬಾಬಣ್ಣನ ಸೊಂಟಲಿದ್ದ ಹಳೇ ಪಟ್ಟೆ

ನೂಲು 'ಪಟ್ಟ್'ಂತ ತುಂಡಾಗಿ ಕೋಮಣ ಸಮೇತ ಭತ್ತದ ರಾಶಿಗೆ ಬೀತ್. ಎಂತ ಮಾಡ್ದು, ಭತ್ತದ ಕುಕ್ಕನ ನೇಚಿದ ಮೇಲೆ ಕುಕ್ಕಿಕಾಗದ್. ಸುತ್ತ ಮುತ್ತ ಇದ್ದ ಹೆಣ್ಮಕ್ಕ, ಗಂಡಂಗ ಬಿದ್ದ್ ಬಿದ್ದ್ ನೆಗಾಡಿ ಕಂಡಿದ್ದಾಂಗೆ ಬಾಬ್ಬಣ್ಣ ಉರ್ರುಬಳಿನೇ ಭತ್ತದ ಕುಕ್ಕನ ಕೊಂಬರೆಗೆ ತಕ್ಕಂಡ್ ಹೋತ್. ಹಕ್ಕಲಿದ್ದ ಬಾಬಣ್ಣನ ಹೆಣ್ಣ್ ನಾಚಿಕೆಲಿ ಎಡ್ಡ ಕೈಲಿ ಕೋಮಣನೂ ಪಟ್ಟೆನೂಲುನು ತಕ್ಕಂಡ್ ಕೊಂಬರಕ್ಕೆ ಹೋತ್.

****

# 11. ದೇವ್ರಾಣೆ



ಮುನ್ನೂರ ಅರವತ್ತ್ ದಿನವೂ ಗದ್ದೆ–ತೋಟಗಳ್ಲಿ–ದನ–ಕರುಗಳೊಟ್ಟಿಗೆ ಮೈ ಮರೆವ ಹಾಂಗೆ; ಕೆಲ್ಸ ಮಾಡಿಕಂಡ್, ಪುರುಸೊತ್ತ್ ಇಲ್ಲದೆ ಜೀವನ ಮಾಡುವ, ಮೊಣ್ಣ್‌ನ ಪುಣ್ಚಿ ಮೊಸ್‌ರ್ ತಿಂಬ ತೇಳುವ ನಾವುಗೆ; ಕೆಲವು ಹಬ್ಬ ಹರಿದಿನಗಳೂ ಬೇಕು. ಆಚಾರ–ಸಂಪ್ರದಾಯಗಳೂ ಬೇಕು. ಹೆಣ್ಣ್ ಮಕ್ಕಳೊಟ್ಟಿಗೆ ಕುಟುಂಬ–ಸಂಸಾರದೊಟ್ಟಿಗೆ, ನೆಂಟರ್, ನಾಡರ್‌ತೇಳಿ ಒಟ್ಟಿಗೆ ಕುದ್ದ್ ಉಂಡ್ ಕುಷಿ ಪಡಿಕ್ಕಾಗಿ ಹಬ್ಬ–ಹೊಸ್ತುಂತ ನಾವು ಮಾಡುವೆ. ಇದೆಲ್ಲ ನಮ್ಮ ಹಿರಿಯೋವು ತೋರ್ಸಿಕೊಟ್ಟ ಬದ್‌ಕನ ಅನುಭವಿನಸಿದ ದಿನಗ.

ಕೃಷಿ ಕೆಲ್ಸನ ಮೂಲವಾಗಿರಿಸಿಕಂಡ್, ಗದ್ದೆ–ತೋಟಗಳ್ಲಿ ಹೆಚ್ಚಿನ ಕೆಲ್ಸಗ ಇಲ್ಲದಿರ್‌ಕನ, ನಮ್ಮ ಹಿರಿಯೋವು ಲೆಕ್ಕ ಹಾಕಿ ಹಬ್ಬ–ಹೊಸ್ತುಂತ ನಾವು ಅನುಭವಿಸುವೆ. ಯಾರಿಗಾರೂ ಸುಖ–ಕಷ್ಟಂತೇಳ್ದು ಜೀವನಲೀ ಬರುವಂತದೆ. ಹೀಂಗೆ ತೇಳಿ ಸುಖ–ಕಷ್ಟಗಳ ಬಂದಾಂಗೆ ಅನುಭವಿಸುದೇ ಜೀವನಂತ ನಾವೆಲ್ಲಾ ತಿಳ್ಕೊಂಡೊವು. ನಮ್ಮ ಹಿರಿಯರ್‌ಂದ ಬಂದ ಪದ್ಧತಿ. ಆಚಾರಗ, ವಿಚಾರಗಳ ನೆಂಪು ಮಾಡಿಕಾದರೂ ನಾವು ಹಬ್ಬ–ಹರಿದಿನಗಳ ಆಚಾರ ಮಾಡೋಕು. ನಮ್ಮ ಹಿರಯೋವು ಮಾಡ್ತಿದ್ದ ಕೆಲ್ಸ ಕಾರ್ಯಗಳಿಗೂ, ಈಗ ನಾವು ಮಾಡುವ ಕೆಲ್ಸ ಕಾರ್ಯಗಳಿಗೂ ಅಜ–ಗಜಾಂತರ ಉಟ್ಟು. ಹಾಂಗೆಂತ ಅದರ ಮರೆಯದಾಂಗೆ, ನಮ್ಮ ಮುಂದೆನ ಮಕ್ಕಳಿಗೆ ಒಂದಷ್ಟಾದರೂ ಉಳ್ಸಿಕಾಂಬಾಂಗೆ ನಾವು ಪ್ರಯತ್ನ ಪಡೋಕು. ದೆವ್ವ ಕಟ್ಟಿದಂವ ಹೇಳ್ದಾಂಗೆ 'ಪೂಗೂ ಕುಸುಮ, ಕುಸುಮಗ್ ಪರಿಮಳ, ಪಂಡ್‌ಂತಾಂಡಲ ಎಂಕ್‌ಲ್ ದೈವ–ದೇವರೆನ್ ನಂಬೋಡು' ಹಾಂಗೆ ನಾವು ಹಳೇ ಸಂಪ್ರದಾಯ–ಸಂಸ್ಕೃತಿಗಳ ಪೂರ ಅಳಿಸಿ ಹೋಗದಾಂಗೆ ನೋಡಿಕಣೊಕೂಂತ ಇದರ ಅರ್ಥ.

ಪೂರ್ವ ಕಾಲಲಿ ಗದ್ದೆ ಬೇಸಾಯ–ದನ ಕರ್‌ಗ ಇಲ್ಲದ ಮನೇನೇ ಇರ್‌ತ್ತಿಲ್ಲೆ. ಏನೆಲ್ಲೆ ತೇಳಿರೂ ನಾಲ್ಕ್ ನಡೆ ದನಗಾದರೂ ಅವನ ಮನೆ ಮುಂದೆ ಹಟ್ಟಿಲಿ ಕಟ್ಟಿ ಹಾಕುವೊ. ಮುಂದೆನ ಕಾಲಲಿ ಹೆಣ್ಮಕ್ಕ, ಮಕ್ಕಳ ಹೆರ್‌ದ್ದರ್ಲಿ ಏನೂ ಕಡಿಮೆ ಇತ್ಲೆ. ಈಗನಾಂಗೆ ಇಷ್ಟೇ ಹೆರೂಕುಂತ ಸರ್ಕಾರದ ಕಟ್ಟ ಕಟ್ಟಳೆನೂ ಇತ್ಲೆ. ಹಾಂಗಾಂಗಿ ಮನೇಲಿ ವರ್ಷಕ್ಕೊಂದು ಮಕ್ಕಳಾಂಗೆ ಹೆತ್ತ್; ಹತ್ತ್– ಹನ್ನೆರಡು ಮಕ್ಕ ಒಂದೇ ಮನೇಲಿ ಇರ್‌ತ್ತಿದ್ದೊ. ಇಷ್ಟು ಮಕ್ಕಳಿಗೆ ಅಯ್ಯೆ ಎದೆ ಹಾಲ್ ಪಾಪ ಎಲ್ಲಿಂದ ಕೊಡ್ದು? ಹಾಂಗಾಗಿ ಮನೆಲಿದ್ದ ಅಯ್ಯೆನಾಂಗೆ, ಹಟ್ಟಿಲಿದ್ದ ಹಸುಗಳೂ ಮಕ್ಕಳಿಗೆ ಅಯ್ಯೆನಾಂಗೆ; ಹಾಂಗಾಗಿ ಈಗಲೂ ನಾವು ಕನ್ನಡಲಿ 'ಗೋಮಾತೆ' ಅಂತ ಕರೆದುಕ್ಕೆ ಅದೇ ಅರ್ಥ.

ನಾ ಈಗ ಹೇಳಿಕೆ ಹೊರ್ಟದ್ ಶುರುಗೆ ಹೇಳ್ದಾಂಗೆ ಹಬ್ಬ–ಹರಿದಿನಗಳ ಬಗ್ಗೆ. ಹಿಂದೆ ಗದ್ದೆ ಬೇಸಾಯ ಎಲ್ಲಾ ಆಗಿ ಕೊಯ್ಲ್‌ನ ಸಮಯಲಿ, ತೇಳಿರೆ ಹೆಚ್ಚ್ ಕಮ್ಮಿ ಚೌತಿನ ಸಮಯಲಿ ಗದ್ದೆ ಬೆಳ್ದ್ ಕೊಯಕೆ ಆದು. ಗದ್ದೆ ಕೊಯ್ದು ಮನೆಗೆ ತಾಕೆ ಮುಂದೆ ಆಗನ ಕಾಲಲಿ ಮನೆನೆಲ್ಲ ಗುಡ್ಸಿ, ಕಾಡ್ ಕಸಾಂತ ತೆಗ್ದ್ ಮನೆ ತುಂಬುಸುವ ಕಾರ್ಯನ ಮಾಡುವೊ. ಅದ್ ಹೇಂಗೆತೇಳಿರೆ, ಒಳ್ಳೆ ದಿನ ನೋಡಿ ಬೊಳ್ಪಿಗೆ ಗದ್ದೆಂದ ಕದ್‌ರ್ ತಂದ್, ಅದರೊಟ್ಟಿಗೆ ಸೊಂತೆ ಬೊಳ್ಳಿ, ಪೊಲಿಸೊಪ್ಪು, ಮಾಯನ ಸೊಪ್ಪು, ಹಲ್‌ಸ್‌ನ ಸೊಪ್ಪು ಎಲ್ಲಾ ಸೇರ್ಸಿ ಮನೇನ ಕೆಲವು ಮುಖ್ಯ ಕಡೆಗಳ್ಲಿ ಕಟ್ಟುವೊ. ವಿಶೇಷವಾಗಿ ಬೆಸೆಗೆಗೆ, ಗೋದಿಕಂಬಕ್ಕೆ, ಕನ್ನಿಕಾ ಕಂಬಕೆ, ಬಾಗ್‌ಲಿಗೆ, ದೇವರ ಕೋಣೆಗೆ, ಬೆಡಿ ಇಸುವಲ್ಲಿಗೆ, ಕಡ್ಕೆ, ಕೊಮ್ಮೆಗೆ ಹೀಂಗೆ ಕಟ್ಟುವೊ. ಆಮೇಲೆ ಮನೇಲಿ ಹೊಸ ಅಕ್ಕಿ ಉಂಬೋದು ಕಾರ್ಯನ ಮಾಡುವೊ. ಆಗೆಲ್ಲ ಹೊಸ್ತು ಉಂಬಕ್ಕೆ ತುಂಬಾ ಬಗೆ ಗೈಪು ಆಕು. ನೆಣೆ ಅಕ್ಕಿ ಆಕು. ಮುಖ್ಯವಾಗಿ ಕೆಸ, ಸೊಂತೆ, ಕೇನೆ ಕಡ್ಲೆ, ಬೀಜದ ಬೆಂಡ್, ಸೊಂತೆಕಾಯಿ ಪಚ್ಚಡಿ, ಎಳಸಂಡೆ, ಕೆಂಬಡೆಕಾಯಿ ಹೀಂಗೆ ಹತ್ತಾರ್ ಬಗೆ ಬಗೆನ ಗೈಪು, ಅದರೊಟ್ಟಿಗೆ ಹೊಸ ಅಕ್ಕಿ ಚೊಲ್ಲಿ ಹಾಕಿ ಮಾಡ್ದ ಕಾಯಿಗಂಜಿ. ಇದರ ದೊಡ್ಡ ದೊಡ್ಡ ಬಾಳ್ಳೆಗಳ ಕೊಯ್ದ್ ಬಾಳ್ಳೆಗೆ ಒಂದೊಂದು ಬಡ್ಸುವೊ. ಹಾಂಗೆ ಇಸಿಕಾಕನ ಬಾಳ್ಳೆ ಮುಟ್ಟಿ ಕೈ ಮುಕ್ಕಂದು ಪದ್ಧತಿ. ಹೀಂಗೆ ಇದರ ತಳ ಮನೆಗಳ್ಲಿ, ಅವರವರ ಮನೆಗಳ್ಲಿ ಹೊಸ್ತು ಆಚರಣೆ ಮಾಡ್ದು ಕ್ರಮ. ಸಾಧಾರಣ ಆ ಒಂದು ತಿಂಗಳ ಮಧ್ಯಾಹ್ನ ಮತ್ತೆ ಕತ್ತಲೆಗೆಂತ ಹೊಸ್ತುಗೆ ಹೋದೆ ಗಮ್ಮತ್. ಹೀಂಗೆ ನಡೇತಿದ್ದ ಒಂದು ಹೊಸ್ತು ಒಮ್ಮೆ ಒಂದು ದೊಡ್ಡ ಕುಟುಂಬಲಿ ನಡೀತಾ ಇತ್ತ್. ಆ ಕುಟುಂಬಲಿ ನೂರಾರು ಮನೆಗೆ ಇದ್ದ, ಕುಟುಂಬದ ತಳ ಮನೆ ಅಂದರೆ ನಾಲ್ಕು ಸೂತ್ರದ ಮನೇಲಿ ಅಂದ್ ಹೊಸ್ತು. ಕುಟುಂಬದ

ಯಜಮಾನ, ಆ ವರ್ಷ ಮದುವೆ ಆದ ಐದಾರು ಮೊದುಮಕ್ಕ, ಒಂದು ಏಳೆಂಟ್ ಶುರು ಹೊಸ್ತು ಕೊಡಿಕೆ ಇರುವ ತೊಟ್ಟಿಲ್ ಕೂಸುಗ ಎಲ್ಲ ಇದ್ದೊ. ತಳ ಮನೇಲೇ ಆ ವರ್ಷ ನಾಲ್ಕ್ ತೊಟ್ಟಿಲ್ ಕಟ್ಟಿಕಂಡ್ ಇತ್ತ್ ಕಂಡದೆ.

ಕತ್ತಲೆ ಕತ್ತಲೆ ಆಕನ ಕುಟುಂಬದೋವು ಒಬ್ಬೊಬ್ಬನೇ ಬಂದ್ ಸೇರಿಕೆ ಶುರು ಮಾಡ್ದೊ. ಹೊಸ ಮೊದುಮಕ್ಕ ಎಲ್ಲ ಅವರವರ ಅತ್ತೆ–ಮಾವನ ಮನೆಗೆ ಬಂದ್ ಅಲ್ಲಿಂದ ಕುಟುಂಬದ ತಳ ಮನೆಗೆ ಬಂದೊಳೊ. ಅಂತೂ ಇಂತೂ ಸುಮಾರ್ ಐವತ್ತ್ – ಅರುವತ್ತ್ ಜನಂಗ ಹೊಸ್ತಿಗೆ ಸೇರ್ದ್ಯೋಳೊ. ಮನೆ ಯಜಮಾನ ಹೊಸ್ತು ಉಂಬಕ್ಕೆ ಎಲ್ಲಾ ರೆಡಿ ಮಾಡಿಕೆ ಹೇಳ್ದೊ. ಶುರುಗೆ ದೇವ್ರುಗೆ ದೀಪ ಇಸಿ ಪ್ರಾರ್ಥನೆ ಮಾಡಿಕಂಡ್ ಮತ್ತೆ ಮಕ್ಕಳಿಗೆ ಹೊಸ್ತು ಕೊಡುವ ಕಾರ್ಯಕ್ರಮ ನಡೀತಾ ಇತ್ತ್. ಕೂಸು, ಮಕ್ಕಳಿಗೆ ಹಾಲ್ ಗಂಜಿ ಕೊಡಿಕಾಕನ ಅಜ್ಜಂದರ್, ಅಜ್ಜಿಕ, ಕೂಸುನ ಸೋದರ ಮಾವಂದರ್, ಅಯ್ಯೆ, ಅಪ್ಪ, ಚಿಕ್ಕವ್ವ–ದೊಡ್ಡವ್ವ, ದೊಡಪ್ಪ, ಸಣಪ ಹೀಂಗೆ ಒಬ್ಬೊಬ್ಬನೇ ಗಂಜಿ ಕೊಟ್ಟ್‌ಕಂಡ್ ಉಗ್ಗ–ಉಗ್ಗ ಉಂಡ್–ಉಗ್ಗುನ ಬೇರ್ ಎಳ್ಳ್ ಮಞಂತ ಬಾಯಿಗೆ ಕೊಡ್ತಿದ್ದೊ. ಕೆಲವು ಮಕ್ಕ ನುಂಗ್ಯಾದರೆ ಇನ್ನ್ ಕೆಲವು ಮಕ್ಕ ಕಿರ್ಚಿ ಕಿರ್ಚಿ ಮರ್ಗ್ತಿದ್ದೊ. ಒಂದೆರಡ್ ಮಕ್ಕ ಮರ್ಗ್ ಮರ್ಗ್ ಮಲ್ಗಿಸಿದಲ್ಲೇ ಹೇಲ್–ಉಚ್ಚೆ ಮಾಡಿಕಂಡ್ದೊ ಉಟ್ಟು.

ಮಕ್ಕಳಿಗೆ ಹೊಸ್ತ್ ಕೊಟ್ಟ್ ಆದ ಮೇಲೆ ಅಷ್ಟ್ ಜನ ಹೊಸ್ತು ಉಂಬಕೆ ಕುದ್ದೊ. ನಾಲ್ಕು ಸೂತ್ರದ ಮನೆ ಆದರ್‌ಂದ ಬಂದ ಕುಟುಂಬದೋವು, ನೆಂಟ್ರ್‌ಗ ಮನೆ ಸುತ್ತ ಉಂಬಕೆ ಕುದ್ದೊ. ಮನೇಲಿದ್ದ ಹೆಣ್ಮಕ್ಕ ಬಂದು ಏಳೆಂಟ್ ಜನ ಬಾಳೆಗೆ ನೀರ್ ಹಾಕಿ ಉಪ್ಪು, ಶುಂಠಿ ಮತ್ತೆ ಬಗೆ ಬಗೆ ಗೈಪುಗಳ ಇಕ್ಕಿಕೆ ಶುರು ಮಾಡ್ದೊ. ಶುರುಗೆ ನೆಣೆ ಅಕ್ಕಿ–ಬಾಳೆಹಣ್ಣ್ ಬಡ್ಸಿದ ಮೇಲೆ ಕಾಯಿಗಂಜಿ ಇಕ್ಯಾಂಡ್ ಹೋದೊ. ಎಲ್ಲಾ ಇಕ್ಕಿ ಆಗುವವರೆಗೂ ಯಾರೂ ಉಂಬಾಂಗೆ ಇಲ್ಲೆ. ಎಲ್ಲ ಬಳ್ಸಿ ಆದ ಮೇಲೆ ಮನೆ ಯಜಮಾನನೊಟ್ಟಿಗೆ ಹೆಣ್ಮಕ್ಕ ಬಳ್ಸಿ ಆತ್‌ಂತ ಹೇಳುವೊ. ಹಾಂಗೆ ಹೇಳಿ ಆದ ಮೇಲೆ ಮನೆ ಯಜಮಾನ ನೆಂಟ್ರ್‌ಗಳ, ಮನೆಯವರ ಕರ್ದ್ 'ಹೊಸ್ತು ಉಮ್ಮೊನೋ'ಂತ ಕೇಳುವೊ. ಆಗ ಹೆಸ್ರ್ ಕರ್ದ್ ಹೇಳಿಕಾಕನ ಅವು ಇತ್ತಂದ 'ದೇವರಪ್ಪಣೆಂತ' ಹೇಳೋಕು. ಇದ್ ಕ್ರಮ. ಆ ವರ್ಷ ಹೊಸದಾಗಿ ಮೊದ್ವೆ ಆದ ಮೊದುಮಕ್ಕಳ ಕೂಡಾ ಹೆಸರ್ ಕರ್ದ್ ಹೇಳಿಕಾಕನ ಎಲ್ಲವೂ ದೇವರಪ್ಪಣೆಂತ ಹೇಳ್ದೊ. ಆದರೆ ಈ ನಾಲ್ಕು ಸೂತ್ರಲಿ ಹಿಂದೆನ ಭಾಗಲಿ ಕುದ್ದ ಒಬ್ಬ ಮೊದುಮಞಂಗೆ ಉಳ್ದೊವು ಎಂತ ಹೇಳ್ದೊಂತ ಸರಿ ಕೇಳದೆ, ಅಣ್ಣ ಹೊಸ್ತು ಉಮ್ಮನಲ್ಲಾಂತ ಕೇಳಿಕಾಕನ ಅಂವ 'ದೇವರಾಣೆ'ಂತ ಹೇಳಿ ಬುಟ್ಟತ್. ಪಾಪ ಅವಂಗೆ ಅವೆಲ್ಲ ಹಾಂಗೆ ಹೇಳ್ದ್‌ತೇ ಗೊತ್ತು. ಅಂದರೆ ಉಂಡರೆ ದೇವರಾಣೆಂತ ಹೇಳ್ದಾಂಗೆ ಆತ್‌ಂತ.

ಕುಟುಂಬದ ಯಜಮಾನ ಕುದ್ದಲಿಂದ ಎದ್ದ್. ಓ ರಾಮ ರಾಮ ನೀ ಎಂತ ತಪ್ಪು ಮಾಡ್ದ ಮಞ. ದೇವರಪ್ಪಣೆ ಹೇಳಕಾದ್. ನೀ ತಪ್ಪಿ ದೇವರಾಣೆ ಹೇಳ್ದಲ್ಲಂತ ಹೇಳಿ, ಮತ್ತೆ ಮನೇವು, ಯಜಮಾನ ಎಲ್ಲವೂ ಕುಲದೇವರಿಗೆ ದೀಪ ಇಸಿ, ಗೊತ್ತಿಲ್ಲದೆ ಬಾಯಿಂದ ತಪ್ಪು ಬಂದುಟ್ಟು. ಅದ್ಕೆ ಕ್ಷಮೆ ಕೊಟ್ಟ್ ನಾವೆಲ್ಲ ಹೊಸ್ತು ಉಂಬಕೆ ಅನುವು ಮಾಡಿಕೊಡೊಕುಂತ ಪ್ರಾರ್ಥನೆ ಮಾಡ್ದೊ ಗಡ. ಹಾಂಗೆ ಮೊದುಮಞನ ತಲೆ ಸುತ್ತ ನಾಲ್ಕಾಣೆ ತಂದ್ ಒಂದ್ ಬಟ್ಟೇಲಿ ಕಟ್ಟಿ ಇಸಿ, ದೀಪಾವಳಿಗಾಕನ ಮುಡಿಪಿಗೆ ಹಾಕುವೆಂತ ಹೇಳಿ ಎಲ್ಲವೂ ಹೊಸ್ತು ಉಂಡೋಗಡ.

****

# 12. ಬೇಟೆ



ಹಿಂದೆನ ಕಾಲಲಿ ನಮ್ಮ ಹಿರಿಯೊವ್ಕೆ ಗದ್ದೆ ಬೇಸಾಯ ಎಲ್ಲ ಮುಗ್ದ ಮೇಲೆ ಬೇರೆಂತ ಕೆಲ್ಸ ಇರ್ತಿತ್ತಿಲೆ. ಹಾಂಗಾಗಿ ಕಾಡಿಗೆ ಬೇಟೆಗೆ ಹೋದು ಒಂದು ಹುಚ್ಚು ಅಗಿತ್ತ್. ಬೇಟೆಂತೇಳಿರೆ ಅದರ ಇತಿಹಾಸನ ಒಮ್ಮೆ ತಿರ್ಗಿಸಿ ನೋಡಿರೆ ಬಾರೀ ಗಮ್ಮತ್ ಇತ್ತ್. ಹಿಂದೆ ಕಾಡ್ ಪ್ರಾಣಿಗ ಊರ್‌ಲಿ, ಕಾಡ್‌ಲಿಂತ ತುಂಬಿ ಹೋಗಿತ್ತ್. ಗದ್ದೆಗೆ, ಬೀಜದ ಕೊಚ್ಚಿಗೆ ಹಂದಿಗ ಬಾದು, ನೆಲ್ಲಿ ಮರದ ಬುಡಕ್ಕೆ ಬರಿಕಂಗ, ಕೆಂಪಗ ಬಾದು, ಹನಿಸ್ ಕಾಡ್ ಕರೆಗೆ ಹೋದರೆ ಕಡ್ದವೆ, ಸಾರೆಜ ಎಲ್ಲ ಕಾಂಬಕೆ ಸಿಕ್ಕುವೊ. ಅಗನ ಕಾಲಲಿ ಬೆಡಿ ಎಲ್ಲ ಬೇಸಾಯ ಮಾಡುವವರ ಹಕ್ಕಲೆ ಇರ್ತಿತ್ತ್. ಅದರೆ ತೋಟೆ ಬೆಡಿ ಕಡಿಮೆ. ಅದ್ ತುಂಬ ದುಡ್ಡಿದ್ದಂವನಕ್ಕಲೆ ಮಾತ್ರ ಇರ್ತಿತ್. ಹೆಚ್ಚಿನ ಜನರ್‌ಲಿ ಕೇಪುನ ಬೆಡಿ. ಅದ್ ಕೆಲವರ ಹಕ್ಕಲೆ ಜೋಡು ನಳಿಗೆನ ಬೆಡಿ ಸಹ ಇರ್ತಿತ್. ಹೆಚ್ಚಾಗಿ ಬೆಡಿನ ಕಂಪೆನಿಂದ ತಕ್ಕಂದು ಕಮ್ಮಿ. ಗ್ಯಾರೇಜ್‌ಂದ ಒಳ್ಳೆ ಜೀಪುನ ಸ್ಟೇರಿಂಗ್ ನಳಿಗೆ ತಂದ್, ಅದರ ಯಾರ್ರ್ಯಾರ್ ಒಳ್ಳೆ ಬೆಡಿ ಕಟ್ಟುವ ಅಚಾರಿನಲ್ಲಿ ಮಾಡ್ಸ್‌ತಿದ್ದೊ. ಕೊಳವೆನ ಎಲ್ಲಾ ಬೇಕಾದಾಂಗೆ ಕೊರ್ದು, ಅಚಾರಿಗ ಮಾಡುವೊ. ಬೆಡಿನ ನೆಳ್ಗೆ ಉದ್ದ ಇದ್ದಷ್ಟ್ ಅದ್ ಚಿಲ್ಲ್ ದೂರ ಹೋದು ಜಾಸ್ತಿಂತ ಮುಂದೆ ಹೇಳ್ತಿದ್ದೊ. ಆ ಬೆಡಿಗಳಿಗೆ ಒಂದು ಎಳೆಂಟ್ ಕಟ್ಟಗ, ಬೀಟಿ ಮರನ, ಪಡದಮರನೋ ಪಾತಿ ಮಾಡಿ ಹಾಕಿರೆ; ಅದ್ಕೆ ಅಳಿವೇ ಇಲ್ಲೆ. ಹಾಂಗೆ ಕಟ್ಟಿದ ಬೆಡಿನ ತಾಲೂಕು ಕಛೇರಿಗೆ ತಕ್ಕಂಡ್ ಹೋಗಿ ತೋರ್ಸಿ, ಅದ್ಕೆ ಸೀಲ್ ಎಲ್ಲಾ ಹಾಕಿ ಪರ್ಮಿಟ್ ಮಾಡ್ಸಿಕಾಂತಿದ್ದೊ. ಆಗ ಈಗನಾಂಗೆ ಲೈಸನ್ಸ್ ಮಾಡ್ಸಿಕೆ ಸಾವಿರ ಕಟ್ಟಲೆ ಖರ್ಚು ಮಾಡೋಕುಂತ ಇತ್ತಲೆ. ಖರ್ಚು ಮಾಡಿರೂ ಈಗ ಅಷ್ಟ್ ಸುಲಬಲಿ ಲೈಸನ್ಸ್ ಸಿಕ್ಕುದುಲೆ. ಮುಂದೆಲ್ಲ ಅಪ್ಪನ ಹೆಸರ್‌ಲಿ ಲೈಸನ್ಸ್ ಇದ್ದರೆ ಅದ್ ಅವರ ಮಳಿಂಗೆ ಸುಲಬಲಿ ಟ್ರಾನ್ಸ್‌ಪರ್ ಮಾಡ್ತಿದ್ದೊ. ಈಗ ಹಾಂಗೆಲ್ಲ ಕೊಡ್ದುಲೆ.

ಒಂದೋ ತುಂಬ ದುಡ್ಡುಬೇಕು. ಇಲ್ಲರೆ ಯಾರ್‍ಯಾರದೋ ಒಳ್ಳೆ ಇನ್‌ಪ್ಲೆಯನ್ಸ್ ಬೇಕು. ಅದು ಈಗ ತಹಶೀಲ್ದಾರ್ ಅಲ್ಲ ಡಿಸಿನೇ ಲೈಸನ್ಸ್ ಕೊಡ್ದುಗಡ. ಹಾಂಗಾಗಿ ಹಳ್ಳಿನ ಮನೆಗಲ್ಲಿ ಬೆಡಿಗಳ ಸಂಖ್ಯೆ ಕಡಿಮೆ ಆಗ್ತಾ ಉಟ್ಟು.

ಆಗ ಹೇಳ್ದಾಂಗೆ ಮುಂದೆಲ್ಲ ಕಾಡ್ ಮೃಗಗ ಜಾಸ್ತಿ. ಹಾಂಗಾಗಿ ಎಷ್ಟೋ ಕಾಡಿಗೆ ಹೋಕನ ಮೊಲಗಳೆಲ್ಲ ದೊಣ್ಣೆಲಿ ಹೊಡ್ದ್ ಕೊಂದದ್ ಉಟ್ಟುಗಡ. ಆ ಸಮಯಲಿ ಬ್ಯಾಟರಿ ಲೈಟ್ ಇತ್ಲೆಗಡ. ಕಾಡಿಗೆ ಹೋಕರೆ ಕಾಡ್‌ಲಿ ಸಿಕ್ಕುವ ಪಿಂಡಿ ಕಾಯಿನ ಲಾಯಿಕ್ ಗುದ್ದಿ, ಅದರ ಹದ ಬರ್ಸಿ ಕ್ಯಾಂಡಲ್‌ನಾಂಗೆ ಉದ್ದಕ್ಕೆ ಕೈಲಿ ರೋಲ್ ಮಾಡುವೊಗಡ. ಅದರ ಕೂಂಜಳ್‌ನಾಂಗೆ ಒಂದು ಕುಕ್ಕೆ ಮಾಡಿ ಅದರ ಕುಕ್ಕೆನಾಂಗೆ ಇದ್ದ್ ಬಾಗನ ತಲೆಗೆ ಟೊಪ್ಪಿನಾಂಗೆ ಹಾಕಂಡ್. ಅದರ ಮೇಲೆ ಬೆದ್‌ರ್‌ನ ಕೊಡಿನ ಹನಿಸ್ ಉದ್ದ್ ಬುಡುವೊ ಗಡ. ಆ ಬೆದ್‌ರ್‌ನ ತಲೇಲಿ ಈ ಪಿಂಡಿ ಬತ್ತಿನ ಕ್ಯಾಂಡ್‌ಲ್‌ನಾಂಗೆ ಹೊತ್ತಿಸಿ ತಲೆ ಮೇಲೆ ಇಸಿಕ್‌ಂಡ್ ಕಾಡಿಗೆ ಹೋದರೆ ಮೊಲಂಗ, ಬರಿಕಂಗ, ಕೆಂಪಂಗ ಎಲ್ಲಾ ಆ ಬೆಳ್ಕ್‌ನ ನೋಡಿಕ್‌ಂಡ್ ಹಕ್ಕಲೆ ಬಾವೊಗಡ. ಅಗ ದೊಣ್ಣೆಲಿನಾ, ಬೆಡಿಲಿನಾ ಹೊಡ್ದ್ ಕೊಲ್ಲುವೊಗಡ. ಅ ಮೇಲೆ ಬ್ಯಾಟರಿ ಲೈಟ್ ಬಾತ್. ಅದರ ತಲೆಗೆ ಕಟ್ಟಿಕಾಂಡ್ ಕಾಡಿಗೆ ಹೋಕೆ ಜನ ಶುರು ಮಾಡ್ದೊ. ಪ್ರಾಣಿಗ ಈ ಬೊಳ್ಪುನ ನೋಡ್‌ಕನ ಅವುಗಳ ಕಣ್ಣ್ ಹೊಳ್ಪಿದೆ. ಅಗ ಅವ್ಕೆ ಗುಂಡು ಹೊಡ್ದ್ ಕೊಲ್ಲುತ್ತಿದ್ದೊ. ಈಗೋಳು ಹಾಂಗೆನೇ ಬೇಟೆ ಮಾಡ್ದು. ಹಾಂಗಾಗಿ ಕಾಡ್‌ಲಿ ಟಾರ್ಚ್ ಬಂದ ಮೇಲೆ ಪ್ರಾಣಿಗಳೆಲ್ಲಾ ನಾಶ ಆಕೆ ಶುರು ಅತ್‌ಂತ ಜನಂಗಳೂ ಹೇಳುವೆ ನಾವೆಲ್ಲ ಅದರ ಒಪ್ಪಿಕಣಕಾದೆ.

ಇದಲ್ಲದೆ ಹಗಲ್ ಹೊತ್ತ್ ನಾಯಿಗಳ ಕರ್‍ಕಂಡ್ ಬಿಸಿಲಿಗೆ ಕಾಡಿಗೆ ಹೋದು ಕೂಡಾ ಒಂದು ಕ್ರಮ. ನಾಯಿಗ ಕಾಡ್‌ಲಿದ್ದ ಪ್ರಾಣಿಗಳ ಮೂರಿಹಿಡ್ದ್ ಬೆರ್ಸಿಕಾಕನ ಗುಂಡು ಹೊಡ್ದ್ ಕೊಲ್ಲುವೊ. ಹಗಲ್ ಹೋದರೆ ಹೆಚ್ಚಾಗಿ ಹಂದಿ, ಕೆಂಪ, ಕಡವೆ ಅಲ್ಲದೆ ತೆಕ್ಕಟೆ, ಕಾಡುಕೋಳಿ, ಕುಳ್ಗುಮೆ ಹಕ್ಕಿಗ, ಎಲ್ಲ ಸಿಕ್ಕುವೊ. ಹೊಳ್ಕೆನ ನಾಯಿಗ ಬೆರ್ಸಿ ಮರಕೆ ಹತ್ತಿಸಿರೆ, ಅದರ್‌ನೂ ಹೊಡ್ದ್ ತಾವೊ. ಒಮ್ಮೆ ನಾಯಿಗಳಿಗೆ ಬೇಟೆ ರುಚಿಸಿಕ್ಕಿರೆ, ಮೊನ್ನ ಬೆಡಿ ಹೆಗ್‌ಲ್ ಮೇಲೆ ಇಸಿರೆ ಸಾಕ್, ಮೊನ್ನಂದ ಮುಂದೆ ಅವು ಕಾಡಿಗೆ ಓಡುವೊ. ಸಣ್ಣ – ಸಣ್ಣ ಹೊಳ್ಕೆಗಳ ಎಲ್ಲ ನಾಯಿಗಳೇ ಬೆರ್ಸಿ ಕಚ್ಚಿ ಕೊಂದ್ ತಂದ್ ಕೊಡ್ದು ಇತ್ತ್.

ಒಮ್ಮೆ ಹೀಂಗೆ ಊರ್‌ಲಿ ಬೇಸಾಯ ಎಲ್ಲಾ ಮುಗ್ದ ಮೇಲೆ ವೆಂಕಪ್ಪ, ಹುಕ್ರಪ್ಪ, ಮಾಧವಂತೇಳೊವು ನಾಯಿಗಳ ಕರ್‍ಕಂಡ್ ಕಾಡಿಗೆ ಹೋದೊ. ಈ ವೆಂಕಪ್ಪತೇಳೊವು ಹೆಚ್ಚಿಗೆ ಕಾಡ್‌ಲೇ ಇರ್ದು. ಇದ್ದ ಗೋಳಿ ಮರಕ್ಕೆ, ಮಡ್ಕ್ಯರ

ಮರಕ್ಕೆ, ಜೊಂಪುಳು ಮರಕ್ಕೆ ಮಳ್ಕೋಲು ಒಡ್ದುದು, ಹಕ್ಕಿ ಹಿಡಿದು, ಅದ್ ಬುಟ್ಟರೆ ಕಾಡ್‌ಲಿದ್ದ ಉಂಡೆ ಹುಳಿ, ಕಾನಕಜ, ಸೀಗೆ, ನೆರುವೊಳು ಹೀಂಗೆ ಕೊಯ್ದು ದುಡ್ಡ್ ಮಾಡ್ದು ಒಂದೇ ಕೆಲ್ಸ. ಅವ್ಕೆ ಎಲ್ಲೆಲ್ಲ ಯಾವ ಯಾವ ಮರಗ ಒಳೊ. ಯಾವ  ಒಟ್ಟೇಲಿ ಪಾಂಜ ಹುಕ್ಕದೆ. ಯಾವ ಮೋಟೆಲಿ ಅಣ್ಕ್ ಸಿಕ್ಕಿದೆ. ಯಾವ ಚೋಡಿಲಿ ಕಡು ಹಾಕಿರೆ ಮೀನ್ ಸಿಕ್ಕಿದೆ. ಯಾವ ಹಣ್ಣ್‌ನ ಮರಕೆ ಕುಳ್ಗುಮೆ ಬಂದವೆ, ಎಳ್ಂದಿಲೆ ಹಕ್ಕಿಗ ಬಂದವೆ. ಯಾವ ಕಜೆಗೆ ಹೋದರೆ ಏಮೆ ಸಿಕ್ಕಿದೆ ಎಲ್ಲಾ ಗೊತ್ತಿತ್ತ್. ಕತ್ತಲೆ– ಕತ್ತಲೆ ಅಕನ ತೆಕ್ಕಟೆನಾಂಗೆ ಸೋಮವಾರ ಸೊಪ್ಪುಲಿ ಮರ್ಟ್. ಅವು ಕುದ್ದುರುವ ಜಾಗೆನ ಅರ್ಸಿ ಕತ್ತಲಾಕನ ದೊಣ್ಣೆಲೇ ಹೊಡ್ದ್ ತೆಕ್ಕಟೆಗಳ ತಿಂಬೊ.. ಅವರ ನೋಡಿರೆ ಪಾಂಡವರ ಹೊಳ್ಕೆನಾಂಗೆ ಹೊಟ್ಟೆ ಎಕ್ಕೆಂಡ್ ಇರುವೊ.  ತಲೆಗೊಂದು ಕೆಂಪು ಮುಂಡಾಸ್, ಸೊಂಟಲಿ ಬಿಳಿ ತೋರ್ತು ಮಾತ್ರ ಇರ್ದು. ಅದರ ಮೇಲೆ ಚೂಡೊಂಕು ಕಟ್ಟಿಕಂಡ್ ಸೊಂಟಕೆ ಎಲ್ಯಾಡಿಕೆ ಚೆಂಚಿನ  ಸಿಕ್ಕಿಸಿಕ್ಂಡ್ ಎಲ್ಯಾರ್ ಮರದ ಬುಡಲಿ ಕುದ್ದರೆ ಕತ್ತಲಾರದೂ ಗೊತ್ತಿಲ್ಲೆ. ಅವುಕೆ ಅಗಾಗ ಬರ್‌ತಿದ್ದ ಕೆಮ್ಮುಲು ಮಾತ್ರ ತಡ್ಯೆಯಕೆ ಅಗದೆ ಗೊಯಿಂಕ್ ಗೊಯಿಂಕ್ ಕೆಮ್ಮಿರೆ ಹಕ್ಕಲೆ ಬಂದ್ ಎತ್ತಿದ ಕಾಡ್ ಪ್ರಾಣಿಗ, ಒಮ್ಮೆಗೆ ಹಾರಿ ಬಿದ್ದ್ ಓಡುವೊ.

ಹೀಂಗೆ ಒಮ್ಮೆ ಈ ಮೂರು ಜನ ಕಾಡಲೇ ತಿರ್ಗಿಯಂಡ್ ಹೋಗ್ತಾ ಇದ್ದೋ. ಒಮ್ಮೆಗೆ ಬಲ್ಲೆ ಒಳಗಿಂದ ಬರ – ಬರಂತ ಕೇಳ್ತ್. ಮೂರು ಜನನೂ ಉಸಿರ್ ಕಟ್ಟಿ ನಿತ್ತೊ.  ಬೆಡಿ ಇರ್ದು ಮಾದವಣ್ಣನ ಹಕ್ಕಲೆ. ಮುಂದೆ ಹೋತಿದ್ದಾ ವೆಂಕಪ್ಪಣನ ಮೆಲ್ಲ ಮುಟ್ಟಿ ನೀ ಹಿಂದೆ ನಿಲ್ಲ್ ನಾ ಮುಂದೆ ಹೋನೆಂತ ಕೈ ಸನ್ನೆ ಮಾಡಿ ಮಾದವಣ್ಣ ಬೆಡಿನ ಸರಿ ಗುರಿ ಇಸಿ, ಕುದುರೆ ಎಳ್ದ್ ಮೆಲ್ಲಂಗೆ ಹೆಜ್ಜೆ ಮೇಲೆ ಹೆಜ್ಜೆ ಇಸಿಕಾಂಡ್ ಹೋದೋ. ಬರ – ಬರ ಶಬ್ದ ಮಾತ್ರ ನಿತ್ತತಿಲೆ. ಎಂತದೋ ದೊಡ್ಡದೇ ಇರೂಕುಂತ ಮುಂದೆ ಮುಂದೆ ಹೋದೊ ಹಿಂದೆ ಇದ್ದ ವೆಂಕಪಣನೂ, ಹುಕ್ರಪಣನೂ ಅಲ್ಲೆ ನಿತ್ತೊ.  ಮಾದವಣ ಹೋಗಿ ಹೋಗಿ ಮೂರು ನಾಲ್ಕ್  ಮಾರು ದೂರ ಹೋಕನ ಮತ್ತೆ  ಬೊಳಿ ಜಾಗೆ. ಪಡೆ ಮುತ್ತಿದ್ ಅಲ್ಲಿ ಹೋಗಿ  ನೋಡಿರೆ ಅದ್ ಬಾಬಣ್ಣನ ಕೆಂದ ಎತ್ತ್. ಇವರ ಗೆಬ್ಬುಳಿಸಿಕ್ಂಡ್ ನೋಡ್ತ್ ಉಟ್ಟು  ನೀನಾ..... ನಿನ್ನ ಹುಲಿ ತಿಂಬಕೆ. ನಾ ಕೆಂಪನೋ.. ಕಡ್ಡವೆನೋಂತಾ ನೆನ್ಸಿದೆ. ನೀ  ಒಂಟಿ ಎತ್ತ್ ಇಷ್ಟ್ ದೂರ ಬಂದಲ್ಲಾ. ಎಲ್ಯಾರ್ ಅಡ್ಡೆ ಬೊಲ್ಪ ಬಂದರೆ ನೀ ಸತ್ತಾಂಗೆಂತ; ಬೊಯ್ಕಂಡ್ ಹಿಂದೆ ಇದ್ದವರ ಕರ್ದೊ. ಅವಿಬ್ಬರ ಸೇರಿಕ್ಂಡ್ ಮತ್ತೆ ಮುಂದೆ ಹೋದೊ. ಹಾಂಗೆ  ಮುಂದೆ ನಾಂಗೆ ಮಾದವಣ್ಣ ಬೆಡಿ ಹೆಗ್‌ಲ್ ಮೇಲೆ ಇಸಿಕ್ಂಡ್ ಮುಂದೆ; ನಡುಲಿ ಹುಕ್ರಪ್ಪಣ್ಣ ಹಿಂದೆಂದ ವೆಂಕಪಣ್ಣ ಹೋಕೆ ಶುರುಮಾಡ್ದೋ.

ಅಲ್ಲಲ್ಲಿ ನಿತ್ತ್‌ಕ್‌ಂಡ್, ಕೆಬಿ ಕೊಟ್ಟ್‌ಕ್‌ಂಡ್ ಹೋಗ್ತಾ ಇದ್ದೊ. ಇದ್ದಕ್ಕಿದ್ದಾಂಗೆ ಮಿಣ್ಪುಳಿ ಪಾರೆ ಪುಡೇಲಿ ಹೋಗ್ತಾ ಇದ್ದಾಂಗೆ; ಹಿಂದಕೆ ದೊಡ್ಡ ಜೆಗ್ಗ್‌ದ ಬಲ್ಲೆ ಸಿಕ್ಕಿತ್. ಬಲ್ಲೆನ ಒಂದ್ ಕೈಲಿ ಬುಡ್ಸಿಕ್‌ಂಡ್ ದಾರಿಗೆ ಅಡ್ಡಾ ದಿಡ್ಡಿ ಬೆಳ್ದಮಾದ್‌ರಿ ಬೊಳ್ಳಿನ ಬುಡ್ಸಿಕ್‌ಂಡ್ ಹೋಗ್ತಾ ಇದ್ದೊ. ಮಾದವಣ್ಣ ಎತ್ತರಲಿ, ಇವಿಬ್ಬರ್ ಹಞ ದೂರಲಿ ಕೆಳಗೆಂದ ಬರ್ತಾ ಇದ್ದೊ. ಇದಕ್ಕಿದ್ದಾಂಗೆ ಮಾದವಣನ ಹೆಗ್‌ಲ್ ಮೇಲಿದ್ದ ಬೆಡಿ 'ಡಂ' ಅಂತ ಹೊಡ್ತ್. ಹೊಡ್ದಾ ಶಬ್ದಕ್ಕೆ ಹೆದ್‌ರಿ ತಿರ್‌ಗಕೊರೆ ಹಿಂದೆಂದ ಬರ್ತಾ ಇದ್ದೊ ವೆಂಕಪಣ್ಣ ಅಯ್ಯೋ...ಂತ ಬುಡ್ಕ ಬಿಡ್ದೊ ಉಕ್ರಪಣ್ಣನೂ ಹೆದ್‌ರಿ ಓ.. ಮಾದಾವ.. ನೀ ವೆಂಕಪಣ್ಣನ ಕೊಂದಂತ ಒಂದ್ ಬೊಬ್ಬೆ ಹಾಕಿದೊ. ಈ ಮಾದವಣ್ಣ ಅಗ ಎಂತದೋ ಬರ – ಬರಂತ ಶಬ್ದಿ ಕೇಳಿಕಾಕನ ಎಳ್ದ ಕುದುರೆ ಹಾಂಗೆ ಇತ್ತ್. ಅದರ ಇಳ್ಸಿಕೆ ಮರ್ತ್ ಹೋಗುಟು. ಈ ಜೆಗ್ಗ್ ಬಲ್ಲೇಲಿ ಹುಕ್ಕೊಂಡ್ ಹೋಕನ ಎಂತದೋ ಕಣೆ ಕಳ್ಳಾಂಗೆ ತಾಂಗಿ ಬೆಡಿ ಹೊಡ್ದ್ ಹೊಗುಟು. ಓ ರಾಮ ರಾಮ..... ಎಂಕಪಣ್ಣ– ಎಂಕಪಣ್ಣಂತ ಕರ್ದರೆ ಇಂವ ಜುವ ಉಟ್ಟು. ಹೊಟ್ಟೆಂದ ಕೆಳಗೆ ಅಳ್ಳೆ ಸೈಡಲಿ ರಕ್ತ ಬರ್ತಾ ಉಟ್ಟು. ಅಯ್ಯೋ ಅಯ್ಯೋ ನೀರ್ ನೀರ್‌ಂತ ಇಂವ ಕೇಳಿಕಾಕನ ಹುಕ್ರಪಣ್ಣ ದೆರಿಪಿಕ್‌ಂಡ್ ಓಡಿ ಹೋಗಿ ಹಕ್ಕಲೆ ಹರೀತಿದ್ದ ಮರ್ಟೆಗುಂಡಿಂದ ಹಿಂಟೆಂಞ ಸೊಪ್ಪುಲಿ ನೀರ್ ತಂದ್ ಬಾಯಿಗೆ ಹೊಯ್ದೊ. ಮಾದವಣ್ಣ ದೆರ್ಪಿಕ್‌ಂಡ್ ತಲೆಲಿದ್ದ ಮುಂಡಾಸ್ ಬಿಚ್ಚಿ ಗಾಳಿ ಹಾಕುತಾ ಒಳೋ.

ಅಯ್ಯನ ಬಂಡೆ ಎಂತ ಮಾಡ್ದುಂತ ಇಬ್ಬರೂ ಮೋರೆ ಮೋರೆ ನೋಂಡಿಕ್‌ಂಡ್; ಇದ್ ಊರ್‌ಲಿ ಗೊತ್ತಾಕೆ ಬೊತ್ತ್. ಎನಾರ್ ಸುಳ್ಳ್ ಹೇಳಿ ಇವನ ಆಸ್ಪತ್ರೆಗೆ ಎತ್ತ್‌ಸೊಕುಂತ ಯೋಚನೆ ಮಾಡ್ದೊ. ಎಂಕಪಣ್ಣ ನಿಂಗೆ ನಡೆಯಕೆ ಅದೊಂತ ಕೇಳಿಕಾಕನ ಅಂವ ಮಲ್ಗಿದಲ್ಲಿಂದಳೇ ತಲೆ ಅಡ್ಸಿತ್. ಎನ್ ಮಾಡ್ದುಂತ ಯೋಚನೆ ಮಾಡಿ, ಮಾದವಣ್ಣ ಒಂದು ಸರ್ಲಿ ಮರದ ದೊಣ್ಣೆ ಕಡ್ದೊ. ಅದ್ಕೆ ಹುಕ್ರಪಣ್ಣ ಉಟ್ಟ್‌ಕ್‌ಂಡಿದ್ದ ಕಂಬಾಯಿನ ಜೋಳಿಗೆನಾಂಗೆ ಕಟ್ಟಿದೊ. ಅವರಕ್ಕಲೆ ದೊಡ್ಡ ಗೆರೆ ಗೆರೆ ಚಡ್ಡಿ ಇದ್ದದರ್‌ಂದ ಕಂಬಾಯಿನ ಅಗತ್ಯ ಇತ್ಲೆ. ಎಂಕಪಣ್ಣನ ಕಂಬಾಯಿಲಿ ಮಲ್ಗಿಸಿ, ಈ ದೊಣ್ಣೆನ ಕಂಬಾಯಿನ ಸೆರೆಗೆ ಹುಗುಸಿ ಎದ್‌ರ್‌ಂದ ಮಾದವ, ಹಾಂಗೆ ಹಿಂದೆಂದ ಹುಕ್ರಪಣ್ಣ, ಹಂದಿ ಹೊತ್ತಾಂಗೆ ಹೊತ್ತೊ. ಅದರೊಟ್ಟಿಗೆ ಬೆಡಿ, ಬೆಡಿ ಚೀಲ, ಕಡ್ಪತ್ತಿ ಎಲ್ಲಾ ಒಂದು ಹೊರೆ. ಆಗಾಗ ಎಂಕಪಣ್ಣ ನೀರ್ ಬೇಕಾ, ಎಂತಾದೆ ಎಂತೆಲ್ಲ ಕೇಳ್ತಾ ಇದ್ದೋ. ಅಷ್ಟೊತ್ತಿಗೆ ಹಿಂಬೊತ್ತಾಗಿ ಹೋತ್. ಸೂರ್ಯ ಮುಳ್ಗಿಕೆ ಆತ್. ಹೆಂಗಿದ್ದರೂ ಎರಡ್ – ಎರಡುವರೆ ಮೈಲ್ ಹಕ್ಕಲೆ ದೂರ ಉಟ್ಟು ಮನೆಗೆ. ಇಬ್ಬರೂ ಸೇಕ್ಯಾಂಡ್, ಬುಕ್ಕ್ಯಂಡ್, ಅಲ್ಲಲ್ಲಿ ಚೊಡ್ಜಿ, ಮುಂಗರಿಸಿ ಬಿದ್ದ್‌ಕ್‌ಂಡ್ ಬಂದೊ.

ಬಂದ್ ಬಂದ್ ಕೇದೆಗೆ ಬನದ ಹಕ್ಕಲೆ ಬಾಕನ ದಾರಿ ಕಾಣದಾಂಗೆ ಆತ್. ಅಲ್ಲಿ ಅವನ ಒಂದು ಬೊಬ್ಯಾಲ್ ಇಸಿ, ಮಾತಾಡ್ಸಿದೊ. ದೇವರ ದಯಂದ ಯಾರೂ ದಾರಿಲಿ ಸಿಕ್ಕದಿದ್ದರೆ ಸಾಕ್‌ಂತ ನೆನ್ಸಿಕ್‌ಂಡ್ ಅಲ್ಲಿಂದ ಹೊತ್ತೊ. ಹೇಂಗಾರ್ ಮಾಡಿ ಎಂಕಪಣ್ಣನ ಮನೆ ಹಕ್ಕಲೆ ಗುಡ್ಡೆ ಹತ್ತಿ, ಕೆಳಗೆ ಇಳ್ದ್ ಮನೆಗೆ ಎತ್ತಿಕಾಕನ, ಎಂಕಪಣ್ಣನ ಹೆಣ್ಣ್ ಮಕ್ಕಳ್‌ದ್ ಬೊಬ್ಬೆನೇ ಬೊಬ್ಬೆ, ಇವಿಬ್ಬರಿಗೂ ಹೆದರಿಕೆ ಅದರೂ ಆ ಸಮಯಲಿ ಧೈರ್ಯ ತಂದ್‌ಕ್‌ಂಡ್ ಅವ್ಕೆ ಸಮದಾನ ಹೇಳ್ದೋ. ಒಳ್ಳ ಬೊಬ್ಬೆ ಹಾಕ್‌ಬೇಡಿ. ಇದ್ ಆಕಸ್ಮಿಕಲಿ ಅದ್. ಯಾರಿಗಾರ್ ಗೊತ್ತಾದರೆ ನಾವು ಜೈಲಿಗೆ ಹೋಕಷ್ಟೆಂತ ಮನೆಯವರ ಬೇಡಿಕಂಡೊ. ಕಂಬಾಯಿನ ಬಿಚ್ಚಿ ವೆಂಕಪಣ್ಣನ ಎದ್ರಿರಿಸಿ ಕುದ್ರಿಸಿದೊ. ಅಳ್ಳೆ ಕಡೆಂದ ರಕ್ತಾ ಹೋದು ನಿತ್ತ್‌ಟು. ಮಕ್ಕಳೊಟ್ಟಿಗೆ ಚೊಂಬುಲಿ ನೀರ್ ತರ್ಸಿ. ಗಡಿನೆಲ್ಲಾ ತೊಳ್ದೊ. ಅ ಗಾಯಕೆ ಕಡೆಂಜ ಎಣ್ಣೆ ಎಲ್ಲ ಹಾಕಿ ನಾಳೆ ಬೊಳ್ಪಿಗೆ ಡಾಕ್ಟ್ರ ಹಕ್ಕಲೆ ಕರ್ಕಂಡ್ ಹೋಗಿ ಎನಾರ್ ಸುಳ್ಳ್ ಹೇಳೋಕುಂತ ನೆನ್ಸಿ. ಅವೆಕಲ್ಲಾ ಸಮಾದಾನ ಹೇಳಿ ಇವಿಬ್ಬರ್ ಹೊರ್ಟೊ. ಎಂಕಪಣ್ಣ ಕತ್ತಲೆಗೆ ಯಾಗೋಳ್‌ನಾಂಗೆ ಮೀನ್ ಕಿಚ್ಚಿ ಹಾಕಿ ಲಾಯಿಕ್ ಉಂಡ್ ಮಲ್ಗಿ, ಬೊಳ್ಪಿಗೆ ಎದ್ದೊ. ಹುಕ್ರಪಣ್ಣನೂ, ಮಾದವಣ್ಣನೂ ಬೊಳಿ ಬೊಳಿ ಬುಡಿಕಾಕನ ಬಂದೊಳೊ. ಬೊಳ್ಪಿಗೆ ನೋಡಿರೆ ಎಂಕಪಣ್ಣನ ಅಳ್ಳೆನ ಚರ್ಮನ ಮೇಲೆ ಒಂದ್ ಎರ್ಡ್ಜಿ, ನಾಲ್ಕಾರ್ ಚೆಲ್ಲ್ ಹೆಟ್ಟಿ ಅಲ್ಲೆ, ಬಾಕಿ ಆಗುಟು. ಅವಂಗೆ ಮಂಡೆ ಮಾರಿ ಹೊಡ್ತ್ಲೆ. ಇನ್ನ್ ಆಸ್ಪತ್ರೆಗೆ ಬೇಡಂತ ಸುಮ್ಮನಾಕೂಂದೊ. ಪಾಪ ಇವು ಹೆದರಿ ಅರ್ಧ ಜೀವ ಹೋದಾಂಗೆ ಆಗುಟು. ಎಂಕಪಣ್ಣನೂ ಹೆದ್‌ರಿ ಮುದ್ದೆ ಆಗಿತ್ತ್. ಹಞ ಸಮಯ ಕಳ್ದ ಮೇಲೆ ಊರ್‌ಲಿ ಇವರ ಕಥೆ ಮೆಲ್ಲ–ಮೆಲ್ಲ ಪ್ರಚಾರ ಆತ್. ಅವು ಒಬ್ಬದೊಂಬ್ಬ ಹೇಳಿ ನೆಗಾಡಿಕಾಂಕೆ ಶುರು ಮಾಡ್ದೊ. ಈ ಸೂಳೆ ಮಞ ನಮ್ಮ ಸುಮ್ಮನಾರ್ 3 ಮೈಲ್ ಹೊರ್ಸುವಾಂಗೆ ಮಾಡ್ತ್‌ಂತ ಹೇಳಿ ಬೊಯ್ಯೊತ್ತಿದ್ದೊ. ವೆಂಕಪ್ಪಣ್ಣ ಸಾಯಕನ ಮುಟ್ಟ ಅಳ್ಳೆಲಿ ಚೆಲ್ಲ್ ಕೈಗೆ ಹಿಡ್ಯಾಕೆ ಸಿಕ್ಕ್‌ತಿತ್ತ್.

****

# 13. ಗುಳಿಗನ ಪೆಟ್ಟ್



ದೆವ್ವ – ದೇವ್ರುರುಗಳ ಮೇಲೆ ಬಾರಿ ನಂಬಿಕೆ ಇಸಿಕ್‌ಂಡಿದ್ದ ಕಾಲ ಅದ್. ಕೃಷಿ– ಬೇಸಾಯ, ಕುಟುಂಬ – ಸಂಸಾರ, ಮಕ್ಕ– ಮೊರಿ, ದನ–ಕರ್, ಬೆಳೆ – ಪೈರ್, ಹೋದಲ್ಲಿ – ಬಂದಲ್ಲಿ, ದೆವ್ವ – ದೇವರ್‌ಗಳ ಮುಂದೆ ಇಸಿಕ್‌ಂಡೇ ನಮ್ಮ ಹಿರಿಯೋವು ಎಲ್ಲಾ ಕಾರ್ಯಗಳ ಮಾಡ್ತಾ ಇದ್ದೋ. ಈಗಲೂ ಮಾಡ್ದುಲೆಂತ ಅಲ್ಲ. ಅಗ ಅಷ್ಟ್ ನಂಬಿಕೆ, ಭಯ–ಭಕ್ತಿ ತೇಳುವಂತದ್ ಇರ್ತಿತ್ತ್. ಎಲ್ಲ ಸುಖ – ಕಷ್ಟಗಳ ಅವರ ಮೇಲೆನೇ ಬಾರ ಹಾಕಿ ನಂಬಿಕ್‌ಂಡ್ ಬರ್ತಿದ್ದೋ ಜನಂಗ ಹೀಂಗೆನೇ ದೆವ್ವಗಳೂ ಕೂಡಾ ಅಷ್ಟೇ ಕಾರಣಿಕೆಂದ ಜನಗಳಿಗೆ ಸತ್ಯಾನ ತೋರ್ಸಿ ಕೊಡ್ತಾ ಇದ್ದೋ.

ಈ ಕಾಲಲಿನೂ ಹಿಂದೆನವರ ಸಂಪ್ರದಾಯ, ಆಚರಣೆಗಳ ಮಾಡಿಕ್‌ಂಡ್ ಬರ್ತಾ ಒಳದ್. ನಾವ್ಗೆಲ್ಲಾ ಗೊತ್ತುಟು. ಪೂರಾ ಗೌಡ ಕುಟುಂಬಲಿ ವರ್ಷಕ್ಕೊಮ್ಮೆ ಗುಳಿಗಂಗೆ ಹರ್ಕೆ ಗುಡ್ಡೇಲಿ ಮಾಡಿರೆ, ಪಾಷಣ ಮೂರ್ತಿ ಅಂದರೆ ಕಲ್ಲುರ್ಟಿಗೆ ಮನೆ ಒಳಗೆ ಹರ್ಕೆ ಮಾಡಿ ಬಡ್ಸುವೊ, ಗುಡ್ಡೇಲಿ ಇಕ್ಕುವೊ ಗುಳಿಜ ನಮ್ಮ ಇಡೀ ಭೂಮಿಲಿ ಆವ ಕೃಷಿನ ರಕ್ಷಣೆ ಮಾಡಿರೆ, ಮನೇಲಿ ಇಕ್ಕುವ ಕಲ್ಲುರ್ಟಿ, ಕುಟುಂಬ ಸಂಸಾರನ ಕೊಟ್ಟಲಿ, ತಂದಲ್ಲಿ ರಕ್ಷಣೆ ಮಾಡಿಕ್‌ಂಡ್ ಬಂದದೆಂತ ಈಗಳೂ ನಂಬಿಕ್‌ಂಡ್ ಬಂದವೆ. ಗುಡ್ಡೇಲಿ ಗುಳಿಗಂಗೆ ಬಳ್ಸ್‌ಕನ ಬರೀ ಗಂಡ್‌ಗ ಮಾತ್ರ ಗುಡ್ಡೇಲಿ ಅಡ್ಗೆ ಮಾಡಿ, ತೆಳಿರೆ ಕೋಳಿ ಗೈಪು, ಹುಗ್ಗೆ ಎಲ್ಲಾ ಮಾಡಿ ಗುಳಿಗನ ಕಲ್ಲ್ ಹಕ್ಕಲೆ ಬಡ್ಸಿ; ಪ್ರಸಾದದ ರೂಪಲಿ ಕೋಳಿ ಗೈಪು ಹುಗ್ಗೆನ ಅಲ್ಲೇ ಗುಡ್ಡೆಲೇ ಉಂಡು ಬಾವೊ. ಮನೆಲಿದ್ದ ಹೆಣ್ಣ್ ಮಕ್ಕ ಅಲ್ಲಿಗೆ ಬರುವಾಂಗೆ ಇಲ್ಲೆ. ಯಾಕೆಂತ ಈಗಳೂ ಯಾರಿಗೂ ಗೊತ್ತಿಲೆ. ಪಾಪ ಗುಳಿಗಂಗೆ ಹೆಣ್ಮಕ್ಕಳ ನೋಡಿರೆ ಆದುಲೆ ನಾ ಏನೋ. ಅಲ್ಲ ಹೆಣ್ಮಕ್ಕ ಬಂದರೆ ಗಂಡ್‌ಗಳಿಗೆ ಬರುವ ಪಾಲ್‌ಲಿ ಕಮ್ಮಿ ಆದೆನಾಂತ ಗೊತ್ತಿಲೆ. ಯಾಕೆ ತೇಳಿರೆ ಗುಳಿಗನ ಕೋಲ ಕೊಡಿಕನ ಹೆಣ್ಮಕ್ಕ ಎಲ್ಲ ಇರಕ್, ಹಂಗಾರೆ

ಗುಡ್ಡೆಗೆ ಯಾಕೆ ಬಾಕೆ ಬೊತ್ತ್‌ಂತ ಹಿರಿಯರೊಟ್ಟಿಗೆ ಕೇಳಿರೆ ಹಾಂಗೆ ಕೇಳ್ದೇ ತೊಪ್ಪುಂತ ಅವು ಹೆದ್‌ರ್‌ಸುವೆ.

ಇನ್ನ್ ಮನೆ ಒಳಗೆ ಇಕ್ಕುವ ಕಲ್ಲುರ್ಟಿಗೆ ಮನೆವೆಲ್ಲ ಇರಾಕ್. ಕೊಟ್ಟ ಹೆಣ್ಮಕ್ಕಗ ಬಂದರೂ ಆದು. ಮನೇಲಿ ಯಜಮಾನ ಮೀದ್ ಕೋಳಿಕೊಂದ್, ಗೈಪು ಮಾಡಿ, ರೊಟ್ಟಿ ಎಲ್ಲಾ ಮಾಡೋಕು. ಅದಾದ ಮೇಲೆ ಮನೆ ಒಳಗೆ ಕೋಳಿಗೈಪು– ರೊಟ್ಟಿ ಬಡ್ಸಿ ಪ್ರಾರ್ಥನೆ ಮಾಡಿಕಂಡ್ ಕಲ್ಲುರ್ಟಿಗೆ ಸರಾಯಿನೂ, ಕಳ್ಳ್ ಎಲ್ಲ ಇದ್ದರೆ ಬಾರೀ ಕುಷಿ, ಇಕ್ಕಿ ಆದ ಮೇಲೆ ನಾವು ಮಾಡ್ದ ಅಡಿಗೆಲಾಗಲೀ, ಮಾಡ್ದ ಅರ್ಚನೆನೆಲಾಗಲಿ, ಅನೇಕ ತಪ್ಪುಗ ಇರ್ರು, ಅದರೆಲ್ಲ ಒಪ್ಪ್ ಸಾರ್‌ಸಿಕಂಡ್ ಮನೆಲಿದ್ದ ಮಕ್ಕ – ಮೊರಿಗಳಿಗೆ, ದನ–ಕರುಗಳಿಗೆ, ಬೆಳೆ ಪೈರಿಗೆ, ಯಾವುದೇ ತೊಂದರೆ ಬಾರದಾಂಗೆ ಕಾಪಾಡುವ ಪುಣ್ಯಕೀರ್ತಿ ಆ ಪಾಷಣಮೂರ್ತಿಗೆಂತ ಪ್ರಾರ್ಥನೆ ಮಾಡಿಕಂಡವೆ. ಹಿಂಗೆ ಕುಟುಂಬದ ಮನೆಲಾಗಲಿ ಇಲ್ಲರೆ ಅವರವರ ಮನೆಗಳ್ಲಿ ಹರ್ಕೆಗಳ ಕೊಟ್ಟವೆ. ಈಗೋಳೋ ಅದರ ಪಾಲಿಸುತ್ತಾ ಒಳೋ.

ಹಿಂದೆನ ಕಾಲಲಿ ಅಲ್ಲಲ್ಲಿ ಬಯಲ್‌ನ, ಒಂಟಿ ಮನೆಗ ಇರುವೊ, ಮನೆಗಳ್ಲಿ ಸುತ್ತಾ ಕಾಡ್; ಕಾಡ್ ಪ್ರಾಣಿಗಳಂತ, ಆನೆಗ, ಕಾಟಿಗ, ಹುಲಿಗ ಹೀಂಗೆ ಹೆದರಿಕೆ ಹುಟ್ಟಿಸುವ ಮೃಗಗ ಇರ್ತಿದ್ದೋ. ಆಗ ಮನೆವೆಲ್ಲ ಸ್ವಾಮೀ ದೈವನೇ ನೀವೇ ಕಾಪಾಡಿಕಾಂಕುಂತ ಕೈ ಮುಗ್ದ್ ಮಲ್ಗುವೊ. ನಂಬಿದ ಭಕ್ತರಿಗೆ ಇಂಬು ಕೊಡುವ; ಅಂದರೆ ಧೈರ್ಯ ಕೊಡುವ ಕೆಲ್ಸವು, ದೈವಗ ಮಾಡ್ತಿದ್ದೊ. ಅದ್ ಎಷ್ಟರ ಮಟ್ಟಿಗೆಂತ ಹೇಳಿರೆ ಆಗನ ಕಾಲಲಿ ಮನೆಂದ ಎಲ್ಲವು ಎಲ್ಲಿಯಾರ್ ಜಂಬರಕ್ಕೆ ಹೋಕುಂತಾದರೆ; ಅಂದರೆ ಅಗನ ಕಾಲಲಿ ಎಷ್ಟ್ ದೂರ ಆದರೂ ನಡ್ದೇ ಹೋಕು, ಹಾಂಗೆ ಹೋದವ್ಕೆ ಅಂದ್ ಬಾಕೆ ಆತ್‌ಲಾರೆ, ಮನೆಂದ ಹೊರಗೆ ನಿತ್ತ್ ಹಿರಿಯೋವು ಕೈ ಮುಗ್ದ್ ಹೇಳಿಕಾಂಬೊ. ಸ್ವಾಮೀ ಗುಳಿಂಞ ನಾವಿಂದ್ ಮನೇಲಿ ಇರ್ದುಲೇ. ನಮ್ಮ ಸಂಬಂದದವನ ಮೊದುವೆಗೆ ಹೋದವೆ. ಈ ಭೂಮಿನ ನಿನ್ನ ಸ್ವಾಧನೆ ಬುಟ್ಟು ಹೋದವೆ. ಹಟ್ಟಿಲಿ ದನ ಕರ್‌ಗ ಒಳೊ. ಬಯ್ಲುಗೆ ಕಳ್ಳ – ಕಾಕರ್ ಬಾವೋ. ನೀನೇ ಜಾಗ್ರತೆಲಿ ನೋಡಿಕಾಂಕುತ ಹೇಳುವೊ. ಅದೇ ರೀತಿ ಮನೆ ಒಳಗೆ ಕಲ್ಲುರ್ಟಿಗೆ ಕೈ ಮುಗ್ದ್ ಹೋವೊ. ಹಿಂಗೆ ದೈವಗಳಿಗೆ ಒಪ್ಪಿಸಿ ಇವು ಹೊರ್ಟ್ ಹೋದ ಮೇಲೆ, ಆ ಬಯ್ಲ್ ಸುತ್ತು ಕತ್ತಲಾಕೆನ ಯಾರ್‍ಯಾರ್ ಬಂದರೆ; ಸೋಟೆ ಬೊಳ್ಪು ನೋಡುವೋ ಗಡ. ಮೊನ್ಸನಾಂಗೆ ಗುಳಿಂಞ ಸೂಟೆ ಇಡ್ದ್ ಬಯ್ಲು ಸುತ್ತಾ ತಿರ್ಗುದುಗಡ. ಮನೆಗೆ ಕಾಡ್ ಮೃಗಗ ಬಾರದಾಂಗೆ, ಬಯ್ಲುಗೆ ಕಳ್ಳಿಕಾಕರ್ ಬರದಾಂಗೆ ಕಾದ್ ನೋಡಿಕಂಬೋದು ಗಡ. ನಮ್ಮ ಅಪ್ಪ ಇರಿಕನ ಹೇಳ್ತದ್ದೋ. ಯಾರ್ ಇಲ್ಲದ ಸಮಯಲಿ, ಸುತ್ತ ಮುತ್ತಲಿನೊವು;

ಇವು ಮನೇಲಿ  ಇಲ್ಲೆಂತ ಗೊತ್ತಾಗಿ, ಬೆಂಡ – ಕಾಯಿ ಕದಿಯಕೆ ಬಂದರೆ ಗದ್ದೆಲಿದ್ದ ನೆಟ್ಟಿ– ಮೆಣಸು ಕೊಯಕೆ  ಬಂದರೆ; ದೂರಂದಳೇ ದೈವ  ಕರ್ದ್ ಹೇಳ್ದುಗಡ. ಬೆಂಡ ತೆಗ್ದರೆ ಒಂದೇ ತಕಂತ ಹೆಳ್ದಗಡ , ಮತ್ತೆ ತೆಗ್ದರೆ ಎರಡ್ ಸಾಕ್‌ಂತ ಹೇಳ್ದಗಡ.  ಮೂರುನೇದ್ ತೆಗ್ದ್ ಹಾಕಿರೆ  ಇನ್ನ್ ಸಾಕ್ ಇಳಿಂತ ಹೇಳ್ದಗಡ. ಅದರ ಮಾತ್ ಮೀರಿ ನಾಲ್ಕನೆದಕ್ಕೆ ಕೈ ಹಾಕಿರೆ ಒಂದು ಪಟೋಂತ ಶಬ್ಧ ಕೇಳ್ತ್‌ಗಡ. ಆ ಹೊತ್ತಿಗೆ  ಚಾಳೆಲಿದ್ದಂವ ಚಾಳೆ ಬುಡಕ್ಕೆ ಬುಡ್ಕಂತ ಬೀಳ್ದ್‌ಗಡ. ಅಂದರೆ ಗುಳಿಗನೇ ಅವನ  ಸೊಂಟಕ್ಕೆ ಹೊಡ್ದ್ ಎಳ್ದ್ ಹಾಕುದುಂತ ಹಿರಿಯೋವು ನಂಬಿಕೆಲಿ ಹೇಳ್ತಾ ಇದ್ದೋ. ಅದ್ ಹೌದುಂತ ನಾವು ಒಪ್ಪಿಕಣಕಾದೆ.

ನಮ್ಮ ಅಪ್ಪ ಹೇಳ್ತಿದ್ದೊ ಇನ್ನೊಂದು ಕಥೆ ತೇಳಿರೆ ತೊಡಿಕಾನ ಪಾಷಣ ಮೂರ್ತಿ ಕೂಡಾ ಬಾರೀ ಕಾರ್ಣಿಕೆನ ದೈವ. ಅದ್ ಮುಂದೆ ಉಳುವಾರ್ ಪಟೇಲರ್ ತೊಡಿಕಾನ  ದೇವರ ಮುಕ್ತೇಶಕರಾಗಿದ್ದ ಕಾಲಲಿ, ಅರಂತೋಡುಂದ ತೊಡಿಕಾನಕ್ಕೆ ಕಾಡ್ ದಾರಿಲಿ ನಡ್ದ್ ಹೋತಿದ್ದೊ ಗಡ. ಜಾತ್ರೆ ಸಮಯಲಿ, ನಡುರಾತ್ರೆ ಜಾತ್ರೆ ಎಲ್ಲಾ ಮುಗ್ಸಿ ಉಳುವಾರ್ ಪಟೇಲ್‌ರ್ ದೇವಸ್ಥಾನಂದ ಒಬ್ಬನೇ ಮನೆಗೆ ಬಾಕನ ಆ ಪಾಶಾಣ ಮೂರ್ತಿ ದೀಟಿಗೆ ಹಿಡ್ಕಂಡ್ ಅವರ ಕರ್ಕಂಡ್ ಬಂದ್  ಮನೆಗೆ ಬುಟ್ಟ್ ಹೋತಿತ್‌ಗಡ. ಎಂತಹ ಸತ್ಯದ ಕಾಲ ಆದ್‌ಂತ ನಾವ್ಗೆ ಈಗಳೂ  ರೋಮ ಕುತ್ತ ಆದೆ. ಅದೇ ರೀತಿ ಸ್ವತಃ ದೈವವೇ ತಪ್ಪು ಮಾಡ್ದಾವಂಗೆ ಶಿಕ್ಷೆ ಕೊಡ್ತಿತ್. ಹಿಂದೆನ ಕಾಲಲಿ ಯಾರಾರ್ ಮೂಂಕುಲಿ – ಬಾಯಿಲಿ ರಕ್ತ ಬಂದ್ ಸತ್ತರೆ ಅದ್ ಗುಳಿಗನ ಪೆಟ್ಟ್‌ಂತ ಹೇಳ್ತಿದ್ದೋ. ಅದರ ನಂಬ್‌ತಿದ್ದೊ. ಕಾಲ ಬದಲಾತ್. ಜನಗಳಿಗೆ ನಂಬಿಕೆ ಕಡಿಮೆ ಆತ್. ಸತ್ಯದ ಕಾಲ ಮರೆಯಾತ್. ಆದರೆ ಸತ್ಯ ಮಾತ್ರ ಮರೆಯಾತ್ಲೆ. ನಂಬಿಕೆ ಇಸಿದವಂಗೆ ಈಗಲೂ ಸತ್ಯ ಗೋಚರ ಆದೆ.

****

# 14. ಹುಲಿ–ಕೊತ್ತಿ



ಹುಲಿ ಕಾಡ್‌ಲಿ ಇರ್ದು, ಕೊತ್ತಿ ಮನೇಲಿ ಇರ್ದು, ಆದರೆ ಹುಲಿಗೆ ಕೊತ್ತಿಗೆ ಹೋಲಿಕೆ ಉಟ್ಟು. ಹುಲಿನ ಒಂದು ಗೊಂಬೆನಾಂಗೆ ಕೊತ್ತಿ ಕಂಡದೆ. ನೋಡ್ದವಕ್ಕೆ ಅನಿಸಿದೆ; ಈ ಕೊತ್ತಿ ನೋಡಿಕೆ ಹುಲಿನಾಂಗೆಂತ. ಕೆಲವೊಮ್ಮೆ ಮನೆಲಿದ್ದ ದೊಡ್ಡ ಕಂತಕೊತ್ತಿ ಇದ್ದರೆ ನಾವೇ ಹೇಳುವೆ. ಅದರ ಗುಮ್ಮ ಚೊಲ್ಲಿಕೆ, ತಿಂದ್ ದೊಡ್ಡ ಹುಲಿನಾಂಗೆ ಬೆಳ್ದುಟುತ. ಒಟ್ಟು ನೋಡಿಕಾಕನ ಹುಲಿಗೂ – ಕೊತ್ತಿಗೂ ಏನೋ ಸಂಬಂಧ ಉಟ್ಟು ಅಂತು ನಿಜ.  ಮೋರೆ, ಕಣ್ಣ್, ಬಾಲ, ಕೈ, ಕಾಲ್, ಬಾಲ ನಡೆದು, ನೋಡ್ದು, ಮಲ್ಗುದು ಎಲ್ಲಾ ಹುಲಿನಾಂಗೆ. ಹುಲಿಗೆ ಬಣ್ಣಲಿ ಹಳದಿ ಕಪ್ಪು ಆದರೆ ಕೊತ್ತಿ ಅದರ ಬ್ಲಾಕ್ ಎಂಡ್ ವೈಟ್ ಇದ್ದಾಂಗೆ ಕಪ್ಪು ಬಿಳುಪು ಚಿತ್ರದಾಂಗೆ ಉಟ್ಟು. ಹುಲಿ ತಿಂಬೋದು ಮಾಂಸನೇ, ಕೊತ್ತಿನೂ ತಿಂಬೋದು ಮಾಂಸನೇ ಅದರೆ ಮೊನ್ಸನೊಟ್ಟಿಗೆ ಇರುವ ಕಾರಣ ಅದ್ ಹಾಲು – ತುಪ್ಪ – ಬೆಣ್ಣೆ ಈಗೀಗ ಬೇಕರಿ ತಿಂಡಿ, ತರಕಾರಿ, ಎಲ್ಲನೂ ತಿಂದದೆ.

ಇಷ್ಟೆಲ್ಲಾ ಹೋಲಿಕೆ ಇವ್ಕೆ ಇರಿಕಾಕನ ಸಂಬಂಧ ಹೇಗೆಂತ ಕೇಳ್ದಕ್ಕೆ, ನಮ್ಮ ಅಪ್ಪ ನನ್ನೊಟ್ಟಿಗೆ ಹೇಳ್ದ ಕಥೆನ. ನಾ ಈಗ  ನಿಮ್ಮೊಟ್ಟಿಗೆ ಹೇಳ್ತಾ ಒಳೆ. ನಾವ್ಗೆಲ್ಲಾ ಅನಿಸಿದ ಹಾಂಗೆ ಹುಲಿ ಮತ್ತೆ ಕೊತ್ತಿ ಒಂದೇ ಅಪ್ಪನ ಮಕ್ಕ ಗಡ, ಹುಲಿಲಿ ಸುಮಾರ್ ಪ್ರಭೇದಗಳ ಒಳೊ ನೋಡಿ, ಅಡ್ಡ  ಬಲ್ಪಿ, ನೀಟ ಬಲ್ಪಿ, ತೇಳಿರೆ ಅಡ್ಡ ಪಟ್ಟೆ ಇರ್ದು ಅಡ್ಡ ಬಲಿಪ, ನೀಟ ಪಟ್ಟೆ ಇರ್ದು. ನೀಟ ಬಲಿಪ. ಹಾಂಗೆ ಚಿರತೆ ಇದ್ ಹುಲಿನ  ಎರಡನೇ ತಮ್ಮ  ಮೂರನೇಯವ ನಾಯಿ

ಕಿರಂತ ಕರ್ದವೆ. ನಾಲ್ಕನೇಯವ ದರ್ಗ್‌ಹುಲಿಂತ ಹೇಳುವೆ. ಐದನೇಯವ ಕಾಡ್ ಕೊತ್ತಿಂತ ಕರ್ದವೆ. ಈಗ ನಮ್ಮ ಮನೆಗಲ್ಲಿರುವವ ಹುಲಿನ ಕಡೇ ತಮ್ಮ ಊರು ಕೊತ್ತಿ. ಈಗ ನಾ ಹೇಳ್ದವೆಲ್ಲಾ ಈಗಳೂ ಕಾಡ್‌ಲೇ ಬುದ್ಕುದು, ಕೆಲವೊಮ್ಮೆ ಹಿಡ್ದ್ ಮೃಗಾಲಯಕ್ಕೆ ಹಾಕಿರೆ ಅವು ಕೂಡಾ ಊರ್‌ಲೇ ಬದ್ಕಕಾದೆ. ಆದರೆ ಹುಲಿನ ಕಡೇ ತಮ್ಮ ಮಾತ್ರ ಕಾಡ್‌ಗೆ ಹೋದರೂ ಕತ್ತಲಾಕನ ಬಂದ್ ಒಲೆ ಚಿಂಟೇಲೇ ಬಂದ್ ಮಲ್ಗುದು.

ಯಾಕೆ ಹೀಂಗೆಂತ ಕೇಳಿರೆ ಅದ್ಕೆ ಒಂದು ಸಣ್ಣ ಕಥೆ ಉಟ್ಟು. ಕಾಡ್‌ಲಿ ಹುಲಿಗ ಪ್ರಾಣಿಗಳ ಹಿಡ್ದ್ ಹಸಿಯೇ ತಿಂಬೋದು ಪದ್ದತಿ. ಅದ್, ಅದರ್‌ಂದ ಸಣ್ಣ ಪ್ರಾಣಿಗಳೆಲ್ಲಾ ಹಿಡ್ದದೆ. ಉದಾ: ಕಡವೆಗಳ, ಸಾರೆಂಙಗಳ, ಕೆಂಪಗಳ, ಮೊಲಂಗಳ, ಕೆಲವೊಮ್ಮೆ ಮೊಸಳೆ ನಾ ಸಹ ಹಿಡ್ದದೆ. ಆದರೆ ಆನೆ, ಕಾಟಿ, ಸಿಂಹಗಳ ಅವ್ಕೆ ಅಷ್ಟ್ ಸುಲಬಲಿ ಹಿಡ್ಯಕೆ ಅದುಲೆ. ಹೀಂಗೆ ಒಮ್ಮೆ ಕಾಡಲಿ ಇರಿಕನ ಕಾಡ್‌ಗೆ ಬೀರ್ ಕಿಚ್ಚಿ ಬಿದ್ದದೆ. ಕಾಡಿಗೆ ಯಾರೋ ಭೇಟೆಗೆ ಹೋದರೆ ಅಲ್ಲಿ ಕಾಡ್ ಪ್ರಾಣಿಗಳಿಗೆ ಗುಂಡು ಹೂಡ್ದರೆ ಅದರ್ಲಿದ್ದ ಕಿಚ್ಚಿ ದರ್ಗ್‌ಗೆಲ್ಲಾ ಹಿಡ್ದ್ ಮತ್ತೆ ಇಡೀ ಮರ ಕಾಡಿಗೇ ಹಿಡ್ದದೆ. ಮುಂದೆಲ್ಲ ಕೇಪುನ ಬೆಡಿ ಇದ್ದದರ್‌ಂದ ಬೆಡಿಗೆ ಮೊದ್ದು ತುಂಬಿಸಿ, ಅದ್ಕೆ ಪೊಂದುಂತ ಕಾಯಿ ಚೊಪ್ಪುನ ಹುರಿನ ಉಂಡೆ ಮಾಡಿ ತುಂಬಿಸುತ್ತಿದ್ದೋ, ಹಾಂಗೆ ಮೊದ್ದು, ಚಿಲ್ಲ್‌ನೊಟ್ಟಿಗೆ ಈ ಪೊಂದು ಕೂಡಾ ಬೆಡಿಂದ ಹೊರಗೆ ಬಂದ್ ಬಿದ್ದದೆ. ಆಗ ಕಾಯಿಚೊಪ್ಪುನ ಪೊಂದುಲಿದ್ದ ಕಿಚ್ಚಿ ಅರ್ಕಿಲ್ ಆದರೆ ಕೂಡ್ಲೆ ಕಾಡ್‌ಗೆ ಹಿಡ್ಕಂಡದೆ.

ಹೀಂಗೆ ಒಮ್ಮೆ ಕಾಡ್‌ಗೆ ಕಿಚ್ಚಿ ಬಿದ್ದ್ ಆಕನ ಕೆಲವು ಪ್ರಾಣಿಗಳಿಗೆ ಬೇಗ ಬೇಗ ಓಡಿಕೆ ಆಗದೆ ಕಿಚ್ಚಿಲಿ ಬಿದ್ದ್ ಸತ್ತವೆ. ಹೀಂಗೆ ಸತ್ತ ಪ್ರಾಣಿನ ಒಮ್ಮೆ ಯಾವುದೋ ಒಂದು ಹುಲಿ ತಿಂದದೆ. ಯಾಗೋಳು ಹಸಿಯೇ ಮಾಸ ತಿಂದ ಹುಲಿಗೆ ಈ ಕಿಚ್ಚಿಲಿ ಬೆಂದ ಮಾಸ ತಿಂದ್ ಆಕನ ಬಾರೀ ರುಚಿ ಮುಟ್ಟಿತ್ ಗಡ. ಹಾಂಗಾಗಿ ಹುಲಿಗೆ ಇನ್ನ್ ಮಾಸನ ಹಸಿ ತಿಂಬೋದು ಬೇಡ ಎನಿದ್ದರೂ ಬೇಸಿಯೇ ತಿನೋಕುಂತ ಆಸೆ ಆತ್ ಗಡ. ಹಾಂಗೆ ಒಂದು ಸರ್ತಿ ದೊಡ್ಡ ಮೃಗನ ಹಿಡ್ದ್ ಹುಲಿ ಕೊಂದತ್ ಗಡ. ಕೊಂದ ಮೇಲೆ ಕಿಚ್ಚಿ ಆಕಲ್ಲಾ, ಹಾಂಗೆ ಕಡೇ ತಮ್ಮನ ಕರ್ದ್ ನೀ ಹೋಗಿ ಕಾಡ್ ಕರೇಲಿದ್ದ ಯಾದಾರ್ ಮನೆಂದ ಕಿಚ್ಚಿನ ಕೊಳ್ಳಿ ತರೋಕುಂತ ಹೇಳಿ ಕಳ್ಸಿತ್ ಗಡ. ಅಣ್ಣನ ಅಪ್ಪಣೆನ ಪಾಲಿಸೋಕುಂತ

ಹೇಳಿ ಕೊತ್ತಿ ಕಾಡ್ ಕರೇಲಿದ್ದ ಮನೆಗೆ ಕಿಚ್ಚಿನ ಕೊಳ್ಳಿಗಾಗಿ ಹೋತ್ ಗಡ. ಹಾಂಗೇ ಹೋಕನ ಆ ಮನೇಲಿ ಯಾರೂ ಇತ್ಲೆ ಗಡ. ಕೊತ್ತಿಗೆ ಕುಷಿ ಆತ್. ಅತ್ತಿತ್ತ ನೋಡ್‌ಕನ ಒಂದು ಚೆಳ್ಳ್ ಬೊಗ್ಗಿ ಹರ್‌ಕ್‌ಲ ಹೆಡೆಗೆಲಿ ಮಲ್ಗಿಕಂಡ್ ಚೆಲ್ಲ್ ಚೆಲ್ಲ್‌ಂತ ಹೇಳ್ತ್. ನೋಡಿರೆ ಅದರ ಒಂದು ಸಂಕಲೆಲಿ ಕಟ್ಟಿ ಹಾಕಿದ್ ಕಂಡತ್. ಈ ನಾಯಿಗೆ ಎನ್ ಮಾಡಿಕೆ ಆಕಿಲೆಂತ ನಿಘಂಟ್ ಮಾಡಿ; ಕೊತ್ತಿ ಮೆಲ್ಲ ಹಿಂದೆನ ಬಾಗ್‌ಲ್‌ಂದ ಅಡ್ಗೆ ಒಳಗೆ ಹುಕ್ಕತ್ ಮನೇಲಿ ಯಾರ್ ಇಲ್ಲದರ್‌ಂದ ಕೊತ್ತಿ ಸೀದಾ ಒಲೆ ಹಕ್ಕಿಲೆ ಹೋತ್ ಒಲೆಲಿ ಸೌದೆ ಕೊಳ್ಳಿ ಹೊತ್ತ್‌ತಾ ಉಟ್ಟು. ಒಲೆ ಮೇಲೆ ಗಂಜಿ ಬೇಯಿತಾ ಇತ್ತ್‌ಗಡ. ಅದರ ಹಕ್ಕಲೆ ಒಂದು ಪಾತ್ರಲಿ ಬಿಳಿ ಎಂತದೋ ಕೊತ್ತಿಗೆ ಕಂಡತ್. ಅದ್ಕೆ ಚೂರು ಮೊರೆ ಹಾಕಿ ನಾಲ್ಗೇಲಿ ನೆಕ್ಕಿತ್. ಬಾರೀ ರುಚಿ ಆತ್. ಸಣ್ಣದರ್ಲಿ ಇರಿಕನ ಅಯ್ಯೆನ ಹಾಲ್ ಕುಡ್ದದ್ ಕೊತ್ತಿಗೆ ನೆಂಪಾತ್. ಇದ್ ಕೂಡಾ ಹಾಲ್‌ಂತ ನಿಘಂಟ್ ಮಾಡಿ ಹಿಂದಕ್ಕೆ ನೆಕ್ಕಿಕೆ ಶುರು ಮಾಡ್ತ್. ನೆಕ್ಕಿ ನೆಕ್ಕಿ ಹೊಟ್ಟೆ ಫುಲ್ ಆತ್. ಹಾಂಗೆ ಕೈಲಿ ಬಾಯಿನೆಲ್ಲಾ ಒರ್ಸಿಕಾಕನ ಕೊತ್ತಿಗೆ ಅಲ್ಲೇ ನಿದ್ದೆ ತೂಗಿತ್ ಗಡ. ಹಾಂಗೆ ಕುದ್ದ ಕೊತ್ತಿಗೆ ಗುರೂ..... ಗುರೂಂತ ನಿದ್ದೆ ಬಂದದೇ ಗೊತ್ತಿಲೆ. ಒಲೆ ಚಿಂಟೆಲಿ ಮಲ್ಗಿದ ಕೊತ್ತಿಗೆ ಕತ್ತಲಾಕನನೇ ಎಚ್ಚರ ಅದ್. ಯಾರೋ ಬಂದ್ ಬಾಗಲ್ ತೆಗ್ದ ಶಬ್ದಕ್ಕೆ ಕೊತ್ತಿ ರಪ್ಪ ಎದ್ದ್ ಕುದ್ದತ್. ಇನ್ನ್ ಇಲ್ಲೆ ಇದ್ದರೆ ನನ್ನ ಸೌದೆ ಕೊಳ್ಳಿಲಿ ಬೊಡ್ದ್ ಕೊಲ್ಲುವಂತ ಹೆದರ್‌ಕೆ ಆತ್. ಅಷ್ಟೊತ್ತಿಗೆ ಅಣ್ಣ ಹೇಳ್ದ ಕಿಚ್ಚಿನ ಕೊಳ್ಳಿ ನೆಂಪಾತ್. ಕೂಡ್ಲೆ ಒಂದು ಸಣ್ಣ ಕೊಳ್ಳಿನ ಕಚ್ಚಿಕಂಡ್ ಕಿಡಿಕೆಲಿ ಹುಕ್ಕು ಕೆಳಗೆ ಹಾರಿ ಕಾಡ್‌ನ ಕಡೆಗೆ ಓಡ್ತ್.

ಇತ್ತ ದೊಡ್ಡಣ್ಣ ಹುಲಿ; ದೊಡ್ಡ ಮೃಗನ ಕೊಂದ್ ಕಿಚ್ಚಿಗಾಗಿ ಕಾದರೆ ಇದರ ಪತ್ರೆನೇ ಇಲ್ಲೆ. ಒಂದ್ ಕಡೆಂದ ಹೊಟ್ಟೆ ಇಸುದು; ಇನ್ನೊಂದು ಕಡೆಂದ ದಾರಿ ನೋಡಿ ನೋಡಿ ಸಿಟ್ಟ್ ನೆತ್ತಿಗೆ ಏರಿಟು. ಆಂ ಬರ್ಲಿ ಆದ್; ಅದರ ಬಾಲಲಿ ಹಿಡ್ದ್ ನೆಲಕೆ ಬೊಡ್ದೇ ಕೊಲ್ಲುಕುಂತ ನಿಘಂಟ್ ಮಾಡ್ತ್. ಸುಮಾರ್ ಹೊತ್ತಿಗೆ ಕೊತ್ತಿ ಹೋಗಿ ಬಾಯಿಂದ ಕಿಚ್ಚಿನ ಕೊಳ್ಳಿನ ಹಾಕಿ ಮಿಯಾಂ ತ ಮರ್ಚತ್. ಕೋಪಲಿ ದೊಡ್ಡ ಹುಲಿ ತಿರ್ಗಿ ನೋಡಿಕನ ಅದರ ಕಣ್ಣ್ ಕೋಪಲಿ ಕೆಂಡದಾಂಗೆ ಆಗುಟು. ಅಲ್ಲೆ ಎದ್ದ್ ನಿಂತ್ ಹೇಳ್ತ್. ನೀ ಬಂದನಾ..... ಬಾ..... ನೀ ಹುಟ್ಟಿತ್ತಿಲೆಂತ ಗ್ಯಾನ ಮಾಡಿಕ. ನಿನ್ನ ಇಂದ್ ಕೊಲ್ಲದೆ ಬುಡಿಕೆಲೆಂತ ಇದರ

ಹಕ್ಕಲೆ ಹಾರ್ತ್. ಕೊತ್ತಿ ಒಟ್ಟಿಗೇ ತೆಗ್ದ್ ಕರೆಗೆ ಹಾರಿ ತಿರ್ಗಿ ನೋಡ್ತ್. ಇಲ್ಲೆಣ್ಣ...... ನಾ......ಂತ ಕೇಳಕೊರೆ ಮತ್ತೊಮ್ಮೆ ಇದರಕ್ಕಲೆ ಬಾಲ ಬೊಡ್ದ್ ಹಾರ್ತ್. ಕೊತ್ತಿಗೆ ಈಗ ನಿಘಂಟ್ ಆತ್; ಇನ್ನ್ ನಾ ಇಲ್ಲಿ ಇದ್ದರೆ ನನ್ನ ಕೊಲ್ಲುದು ಗ್ಯಾರೆಂಟಿಂತ ನೆನ್ಸಿ, ದೂರಂದ ಕರ್ದ್ ಹೇಳ್ತ್. ಆತ್ ನಾ ಇನ್ನ್ ನಿನ್ನ ಹಕ್ಕಲೆ ಬಾದುಲೆ. ನಾ ಬೇಕುಂತ ಲೇಟ್ ಮಾಡ್ತ್‌ಲೆ ಅಲ್ಲೆ ಒಲೆ ಚಿಂಟೆಂಲಿ ಹಾಲ್ ಇಸಿ ಕಂಡ್ ಇತ್ತ್. ಸರಿ ಕುಡ್ದ್ ಆಕನ ನಂಗೆ ಗೊತ್ತೇ ಇಲ್ಲದೆ ನಿದ್ದೆ ಬಾತ್. ಅದ್ಕೆ ನಾ ಎನ್ ಮಾಡ್ದು. ತೊಂದರೆ ಇಲ್ಲೆ ಇನ್ನ್ ನಿನ್ನ ಸಹವಾಸ ಬೇಡ, ನಾ ಅದೇ ಮನೆಗೆ ಹೋಗಿ ಇದ್ದನೆ. ನಿಂಗೆ ನಾ ಇನ್ನ್ ಸಿಕ್ಕಿಕಿಲೆ. ನಾ ಬುಟ್ಟ್ ನನ್ನ ಹೇಲ್ ಕೂಡಾ ನಿಂಗೆ ಕಾಂಬಕೆ ಸಿಕ್ಕಿಕಿಲೆಂತ ಹೇಳಿ ಬಾತ್ ಈಗಳೂ ನೋಡಿ ಕೊತ್ತಿ ಹೇತ್ ಅದ್ಕೆ ಮೊಣ್ಣು ಮುಚ್ಚಿ ಇಸಿದೆ. ಹಾಂಗಾಗಿ ಹುಲಿನ ಕಡೇ ತಮ್ಮನ ಹೇಲ್ ಕೂಡಾ ಹುಲಿಗೆ ನೋಡಿಕೆ ಆದುಲೆ. ಹೇತಾಗಿ . ಮೂಸಿ, ಮೂಸಿ, ಮೊಣ್ಣುನ ಮುಚ್ಚುದರ ನಾವು ಕೂಡಾ ನೋಡುವೆ.

****

# 15. ಪುಳ್ಳಿ – ಬೆದ್ರ್ ಕಡ್ತ್



ಕಣ್ಣ್ ಕಳ್ಳ ಕೈ ಸುಬಗಂತ ಹಿರಿಯೊವು ಹೇಳುವೆ. ಯಾಕೆ ಅಂತ ಗಾದೆ ಹುಟ್ಟಿಕಾಂತ್ ತೇಳಿರೆ ಯಾವುದೇ ಒಂದು ದೊಡ್ಡ ಕೆಲ್ಸನ ಕಣ್ಣ್‌ಲಿ ನೋಡಿರೆ ಇದ್ ಅಕೆ ಉಟ್ಟುಂತ ಮನ್ಸ್‌ಗೆ ಅನ್ಸಿದೆ. ಹಾಂಗೆಂತ ಮನ್ಸ ಮಾಡಿ ಒಂದೊಂದೇ ಮಾಡ್ತಾ ಹೋದರೆ ಆ ಕೆಲ್ಸ ಅದೆ. ನಾವು ಒಂದು ಗುಡ್ಡೆನ ಬುಡಲಿ ನಿತ್ತ್ ನೋಡಿಕನ... ರಾಮಾ ರಾಮಾ.. ಇಷ್ಟು ದೊಡ್ಡ ಗುಡ್ಡೆನ ಹತ್ತಿಕುಟ್ಟಾಂತ ಅನ್ಸಿದೆ. ಹಾಗೆಂತ ಬರೀ ಗುಡ್ಡೆ ಅಲ್ಲದೆ ಹಿಮಾಲಯಲಿರುವ ಐಸ್ ಗುಡ್ಡೆನೇ ಹತ್ತಿದೊವು ಎಷ್ಟಿಲ್ಲೆ? ಅಂದರೆ ತಿಳ್ಕೋವು ಹೇಳ್ದಾಂಗೆ ಗುಡ್ಡೆನ ಬುಡಲಿ ನಿತ್ತ್ ನೋಡಿರೆ ಅದ್ ನಮ್ಮ ತಲೆಂದ ನೂರಾರು ಪಟ್ಟ್ ಎತ್ತರಲಿ ಇದ್ದದೆ. ಅದರ ಚೂರು ಚೂರೇ ಕಷ್ಟ ಪಟ್ಟ್ ಹತ್ತಿಕಂಡ್ ಹೋದಾಂಗೆ ಅದ್ ನಮ್ಮಂದ ಕೆಳಗೇ ಬಂದದೆ. ಕಡೆಗೆ ಅಷ್ಟ್ ದೊಡ್ಡ ಗುಡ್ಡೆ ನಮ್ಮ ಪಾದದ ಕೆಳಗೆ ಇದ್ದದೆಂತ. ಅಂದರೆ ಸಾದಿಸಿಕ್ಕೆ ಅಗದೇ ಇರ್ದು ಯಾವುದು ಇಲ್ಲೆಂತ ಅದರ ಅರ್ಥ.

ಈ ಪೀಠಿಕೆನ ಹಿನ್ನಲೆ ಎನ್ಂತ ಕೇಳಿರೆ; ಅಂತದೇ ಒಂದು ಕಥೆ. ಒಂದು ಊರುಲಿ ಒಬ್ಬ ಅಜ್ಜಿ ಇತ್ತ್‌ಗಡ. ಆ ಅಜ್ಜಿಗೆ ಒಬ್ಬ ಪುಳ್ಳಿನೂ ಇತ್ತ್. ಆಪುಳ್ಳಿ ಸಣ್ಣ ಕೂಸು ಇರಿಕಾಕನನೇ ಅವನ ಅಯ್ಯೆ – ಅಪ್ಪ ಇಬ್ಬರೂ ಯಾವುದೋ ದೊಡ್ಡ ಕಾಯಿಲೆ ಬಂದ್ ಸತ್ತ್ ಹೋದಗಡ. ಮತ್ತೆ ಈ ಕೂಸು ತಬ್ಬೆರಿ ಆತ್. ಹಾಂಗೆ ತಬ್ಬೇರಿ ಆದ ಕೂಸುನ ನ ಅಜ್ಜಿ ತಂದ್ ಸಾಂಕಿತ್. ಅಯ್ಯೆ – ಅಪ್ಪ ಇಲ್ಲದ ಕೂಸುಂತ, ಕೂಸು ಕೇಳ್ದರೆಲ್ಲಾ ಅಜ್ಜಿ ತಂದ್ ಕೊಟ್ಟತ್. ಕೂಸುನ ಮೀಸುದರ್ಂದ ಹಿಡ್ದ್, ಅವನ ಅಂಗಿ ಚೆಡ್ಡಿ ಒಗ್ಯದರ್ಂದ ಹಿಡ್ದ್, ಅವನ ತಲೆ ಬಾಚುದು, ಬಾಯಿಗೆ ತಿನ್ಸುದು, ಕುಂಡೆ ತೊಳ್ಯೆದು ಎಲ್ಲಾ ಅಜ್ಜಿನೆ. ಕತ್ತಲೆಗೆ ತೊಡೆ ಮೇಲೆ ಮಲ್ಗಿಸಿಕಂಡ್ ಬೇರೆ ಬೇರೆ ಕಥೆ ಹೇಳಿಕಂಡ್ ಕೂಸುನ ತಲೇಲಿ ಕೈ ಯಾಡಿಸಿ, ಆಡಿಸಿ ನಿದ್ದೆ ಮಾಡ್ಸುದು ಅಜ್ಜಿನೆ. ಹೀಂಗೆ ಕೂಸು

ಬೆಳೀತಾ, ಬೆಳೀತಾ ದೊಡ್ಡಂವ ಆತ್. ಮೋರೆಲಿ, ಅಲ್ಲಿ – ಇಲ್ಲಿಂತ ಮೀಸೆ, ರೋಮಂತ ಬಾಕೆ ಶುರು ಆತ್. ಆದರೆ ಬುದ್ಧಿ ಮಾತ್ರ ಬೆಳ್ತ್‌ಲೆ. ಈಗಲೂ ಸಣ್ಣ ಮಕ್ಕಳಾಂಗೆ ಮಾಡ್ದು ಇವನ ಸ್ವಭಾವ. ಹಿಡ್ದದಕೆ, ಮುಟ್ಟಿದಕ್ಕೆ ಅವ್ವಾ – ಅವ್ವಾಂತ ಕರ್ಕಂಡೇ ಇರ್ದು, ಹೋದಲ್ಲಿ ಬಂದಲ್ಲಿ ಅಜ್ಜಿನ ಸೆರೆಂಗ್ ಹಿಡ್ದ್‌ಂಡೇ ಇರ್ದು. ಊರ್‌ನವೆಲ್ಲಾ ಅಜ್ಜಿಗೆ ಬೊಯ್ಯಕೆ ಶುರು ಮಾಡ್ದೋ. ನೀ ಎಂತ ಅಜ್ಜಿ ಅವನ ನೀ ಹಾಂಗೆ ಬೆಳ್ಸಿರೆ ಅಂವ ಯಾಕೂ ಬೇಡದಂವ ಆದೆ. ಅವಂಗೆ ಏನರ್ ಕೆಲ್ಸ ಮಾಡಿಕೆ ಕಲ್ಸಕು. ಇನ್ನ್ ಅವನ ಚೆಡ್ಡಿ ಅಂಗಿ ಒಗ್ಯಾಕೆ ಬೊತ್ತ್. ಈಗಲೂ ಸಣ್ಣ ಮಕ್ಕಳಾಂಗೆ ಉಣ್ಸುದು ಯಾಕೆ? ಮೀಸುದು ಯಾಕೇ? ಅವನೇ ಹೋಗಿ ಮೀಕಣಲಿ ನೀ ಇಷ್ಟು ದೊಡ್ಡ ಗೊಡ್ಡನ ಮೀಸುದು ಸರಿ ಇಲ್ಲೆಂತ ಬೊಯ್ಯಕೆ ಶುರು ಮಾಡ್ದೋ.

ಅಜ್ಜಿಗೂ ಇದ್ ಹೌದುಂತ ಅನ್ಸಿತ್. ಹೀಂಗೆ ಇವನ ನಾ ಬೆಳ್ಸಿರೆ ಇಂವ ದೊಡ್ಡ ಹೆಡ್ಡ ಧೂಮ ಆದೆಂತ ತೀರ್ಮಾನ ಮಾಡಿ, ಒಂದೊಂದೇ ಕೆಲ್ಸ ಹೇಳಿಕೆ ಶುರು ಮಾಡ್ತ್. ಸಣ್ಣ – ಪುಟ್ಟ ಕೆಲ್ಸಗಳ ಅದೂ– ಇದೂಂತ ಮಾಡಿಕಂಡ್ ಎನಾರ್ ಕೈಗೆ – ಕಾಲಿಗೆ ತಾಂಗಿಸಿಕಂಡ್ ಬಂದ್ ಸಣ್ಣ ಮಕ್ಕಳಾಂಗೆ ಮರ್ಡ್ತಿತ್. ಮರ್ಡ್‌ಕನ ಅಜ್ಜಿನ ಹೊಟ್ಟೆ ಚುರ್‌ಕ್ಕಂತ ಆಗಿ ಮರ್ಡ್‌ಬಡ ಮಳಿ ಬಂಗ ಆದರೆ ನಾ ಮಾಡಿನೆ. ನೋಡು ಇದರ ಹೀಂಗೆ ಮಾಡೋಕು ಹಾಂಗೆ ಮಾಡೋಕುಂತ ಒಂದೊಂದರ ಹೇಳಿ ಕೊಟ್ಟಿತ್. ಹಾಂಗೆ ಹನಿಸ್ ಹನಿಸ್ ಹೈದನೂ ಕಲ್ತ್‌ಕಂಡ್ ಬಾತ್. ಅದರ ನೋಡಿ ಅಜ್ಜಿಗೆನೂ ಕುಷಿ ಆತಿತ್. ದನ ಕಟ್ಟುದು, ಹಟ್ಟಿಗೆ ಸೊಪ್ಪು ಹಾಕುದು, ದನಕ್ಕೆ ಕುಡಿಯಕೆ ಕೊಡ್ದು, ದನ ಮೇಸುದು, ನೀರಡಿಗೆ ಕಿಚ್ಚಿ ಮೊಡ್ದು, ಬಟ್ಟೆ ಒಗ್ಯೋದು, ಅದರ ಒಣ್ಗಿಕೆ ಹಾಕುದು, ದನಕ್ಕೆ ಹನಿಸ್ ಹನಿಸ್ ಹುಲ್ಲು ಹೆರ್ದ್ ತಾದು, ಹೀಂಗೆ ಮಾಡ್ತಿತ್. ಹುಲ್ಲು ಹೆರೆಕನ ಎಷ್ಟೋ ಸರ್ತಿ ಕೈಗೆ ಕಡ್ಕಂಡ್ ರಕ್ತ ಅರ್ಸಿಕಂಡ್ ಮನೆಗೆ ಓಡಿ ಬಾತಿತ್. ಆಗ ಅವನ ನೋಡಿಕನ ಅಜ್ಜಿಗೆ ಪಾಪ ನನ್ನ ಕೂಸುಗೆ ಅಯ್ಯೆ– ಅಪ್ಪ ಇದ್ದಿದ್ದರೆ ಹೀಂಗೆ ಆತಿತ್ತಿಲೆ. ಇಂವ ಹೆಂಗಿರ್ತಿತ್ತೋ ಏನೋ. ಶಾಲೆಗೆ ಹೋಗಿ ವಿದ್ಯೆ– ಬುದ್ದಿಂತ ಲಾಯಿಕ್‌ಲಿ ಇರ್ತಿತ್. ಆದರೆ ಇಂದ್ ನಾ ಇದ್ದದರ್‌ಂದ ಇವಂಗೆ ಹೀಂಗಾರ, ಜೀವ ಉಟ್ಟಲ್ಲಾಂತ ಮನ್ಸಲೇ ನೆನ್ಸಿಕಂಡ್ ಕಣ್ಣೀರ್ ಹಾಕ್‌ತಿತ್ತ್.

ಹೀಂಗೆ ಒಂದೊಂದೇ ಕೆಲ್ಸಗಳ ಕಲ್ತ್ ಹೈದ, ಇನ್ನ್ ಎನಾರ್ ಮಾಡಿ ಬೊಡ್ಕ್‌ದುಂತಾ ಆತ್. ಹಾಂಗೆ ಇರಿಕನ ಒಮ್ಮೆ ಅಜ್ಜಿ ಇವನೊಟ್ಟಿಗೆ ಕತ್ತಿ ಕೊಟ್ಟ್ – ಒಮ್ಮೆ ಆ ತೋಟದ ಕರೇಲಿ ಇದ್ದ ಬೆದ್‌ರ್‌ನ ಕಡಿಯೋಕು ಮಳಿಂತ ಹೇಳ್ತ್. ಮಳಿ ಆತ್ ಅವ್ವಂತ ಹೇಳಿ; ಕತ್ತಿನ ಹರಿ ಮಾಡಿ ಬೆದ್‌ರ್ ಹಿಂಡ್ಲಿಗೆ ಹೋಗಿ ಬೆದ್‌ರೆಗೆ ಕಡ್ತ್. ಆದರೆ ಅದರ್ಲಿ ಮುಳ್ಳು ಉಟ್ಟು ಅದ್ ಕೈಗೆ

ತಾಂಗಿದೆಂತ ಇವಂಗೆ ಗೊತ್ತ್‌ಲೆ. ಕೈ ಎಲ್ಲಾ ಹರ್ದ್ ಹೋಗಿ ಚೆಲ್ಲ್ ಆತ್. ಇದರ ಸುತ್ತ ಎತ್ತ ಹೋದರೂ ಮುಳ್ಳು. ಇದರ ಹೇಂಗೆ ಕಡಿಯೊದಂತ ಅಲ್ಲೆ ಸುಮ್ಮನೆ ಕುದ್ದತ್ ಸುಮಾರ್ ಮಧ್ಯಾಹ್ನ ಆಕನ ಸೀದಾ ಮನೆಗೆ  ಬಾತ್. ಅವ್ವ ಅದರ ಕಡಿಯಕೆ ಬೊತ್ತ್ ಬರೀ ಮುಳ್ಳು ಒಂದೇ. ನಾ ಹೋಗಿ ಕಡ್ದಲೆಲ್ಲ ಮುಳ್ಳು ತಾಂಗಿದೆ ನಂದ ಬೊತ್ತ್. ನಂಗೆ ಈಗ ಹೊಟ್ಟೆ ಇಸಿದೆ ನೀ ನಂಗೆ ಗಂಜಿ ಇಕ್ಕ್‌ಂತ ಹೇಳ್ತ್. ಅಜ್ಜಿಗೆ ಇವಂಗೆ ಹೇಂಗೆ  ಹೇಳ್ದುಂತ ಯೋಚನೆ ಮಾಡಿ. ಆತ್ ಮಿಣಿ ನಾ ಇಕ್ಕಿಕೊಟ್ಟನೆಂತ ಹೇಳಿ; ಆಗ ತಾನೆ ಒಲೆಂದ ಇಳ್ಗಿ ಮರ್ಚಟೆ ಮುಚ್ಚಿ ಇಸಿದ ಬಿಸಿ ಬಿಸಿ ಗಂಜಿನ ಬಟ್ಲ್‌ಗೆ, ಹಾಕಿ ಕೊಟ್ಟತ್. ಇನ್ನೊಂದು ಪಿಂಞಣಿಲಿ ಕಾಯಿ ಪೊಜ್ಜಿನ ಹಾಕಿ ಕೊಟ್ಟ್ ಇಂದ ಉಣು ಮಿಣಿಂತ ಹೇಳ್ತ್. ಮುಂದೆನೇ ಕೈ ಚೆಲ್ಲ್ ಆದ ಹೈದಂಗೆ ಈ ಬಿಸಿ ಬಿಸಿ ಗಂಜಿಗೆ ಕೈ ಹೆಟ್ಟಿಕೆ ಆದುಲೆ. ಅಯ್ಯೋ ಇದರ ಹೇಂಗೆ ಉಂಬೋದು ಅವ್ವಂತ ಸಿಟ್ಟ್‌ಲಿ ಕೇಳ್ತ್. ಅದರ ಒಮ್ಮಗೆ ಕೈ  ಹಾಕ್‌ಬಡ ಮಿಣಿ; ಒಂದು ಕರೇಂದ ಉರ್‍ಗಿ ಉರ್‍ಗಿ ಉಣು, ನೀ ಅರ್ಧ ಉಂಡ್ ಆಕನ ಅದ್ ತಣ್ಣಂಗಾದೆಂತ ಹೇಳ್ತ್. ಹೈದ ಹಾಂಗೆ ಕರೇಂದ ಉರ್‍ಗಿ ಉರ್‍ಗಿ ಉಂಬಕೆ ಶುರು ಮಾಡ್ತ್.

ಅಜ್ಜಿ ಅಲ್ಲೆ ಹಕ್ಕಲೆ  ಕುದ್ದ್‌ಕಂಡ್ ಪುಳ್ಳಿನ ತಲೆ ಪೂಜಿಕಂಡ್ ಹೇಳ್ತ್. ನೋಡ್ ಮಿಣಿ ನೀ ಅಷ್ಟ್ ಬಿಸಿ ಬಿಸಿ ಗಂಜಿನ ಒಂದು ಕರೇಂದ ಉರ್‍ಗಿ ಉರ್‍ಗಿ ಉಂಡ. ಈಗ ನೋಡು ಅರ್ಧ ಬಟ್ಲ್ ತಣ್ಣಂಗಾಗುಟು. ಇನ್ ಸರಿ ಉಣಕ್‌ಂತ ಹೇಳ್ತ್. ಹೈದನೂ ಹೌದು ಅವ್ವ  ಈಗ ತಣ್ಣಗಾಂಗುಟುಂತ ಸರಿ ಉಂಬಕೆ ಶುರು ಮಾಡ್ತ್. ಆಗ ಅಜ್ಜಿ ಹೇಳ್ತ್ ನೋಡ್ ಮಿಣಿ ನೀ ಉಂಡ್ ಆಗಿ ಕತ್ತಿ ತಕ್ಕಂಡ್ ಹೋಗಿ ಆ ಬೆದ್‌ರ್ ಹಿಂಡ್ಲ್‌ನ ಒಂದು ಕರೇಂದ ಕಡ್ಯಕೆ ಶುರು ಮಾಡ್. ಈಗ ಬಿಸಿ ಬಿಸಿ ಗಂಜಿ ಉಂಡಂಗೆ. ಕೈಗೆ ತಾಗದಂಗೆ ಎಡ್ದ ಕೈಲಿ ಅದರ ಹಿಂಕ್‌ಲ್‌ನ ಹಿಡ್ದ್ ಕಡಿ, ಅರ್ಧಾಂಶ ಕಡ್ದ್ ಆಕನ ಮತ್ತೆ ನಿಂಗೆ ಬೆದ್‌ರ್‌ನ ಬುಡ ಸಿಕ್ಕಿದೆ. ಒಂದೊಂದೇ ಬೆದ್‌ರ್‌ನ ಕಡ್ದ್ ಎಳಿ ಅದ್ ಬಂದದೆಂತ ಹೇಳ್ತ್. ಹೈದಂಗೆ ಲಾಯಿಕ್ ತಲೆಗೆ ಹುಕ್ಕತ್. ಉಂಡಾ ಹೈದ ಹೋಗಿ ನಿದಾನಲಿ ಹಿಂಕ್‌ಲ್‌ನ ಹೆರ್ದ್. ಬೆದ್‌ರ್ ಕಡಿಯಕೆ ಶುರು ಮಾಡ್ತ್. ಮುಂದೆ ಆ ಹೈದ ಒಬ್ಬ ಒಳ್ಳೆ ಕೆಲ್ಸಗಾರನಾಗಿ ಊರ್‌ಲೇ ಒಳ್ಳೆ ಹೆಸ್ರ್ ಮಾಡ್ತ್. 'ಅಜ್ಜಿ ಸಾಂಕಿದ ಪುಳ್ಳಿ ಬೊಜ್ಜಕ್ಕೂ ಆಕಿಲೆ.' ತೇಳುವ ಗಾದೆನ ಸುಳ್ಳು ಮಾಡ್ತ್.

****

# 16. ಕಚ್ಚೆ ಬಿಚ್ಚಿ; ಅಡ್ಡ ಬೀಳ್ದು



ಸಂಪ್ರದಾಯ, ಆಚರಣೆ, ಪದ್ದತಿ ತೇಳ್ದು ಎಲ್ಲ ಒಂದಕ್ಕೊಂದು ಸಂಬಂಧ ಉಟ್ಟು. ಕೆಲವೊಂದು ಶುಭ – ಅಶುಭ ಕಾರ್ಯಗಳಲ್ಲಿ ನಾವು ಈಗಲೂ ಸಂಪ್ರದಾಯ ಬುಡಿಕೆ ಬೊತ್ತ್‌ಂತ ಹೇಳೊವು, ಹಿಂದೆಂದೆ ನಡೆದ್ ಬಂದ ಆಚರಣೆ ಹೀಂಗೆ ಇರುಕುಂತ ಈಗಳೂ ಹೇಳುವೆ. ಅದ್ ಹಿಂದೆಂದೊಳು ನಡೆದ್ ಬಂದ ಪದ್ದತಿಂತ ಮಾತಿಗೆ ಹೇಳುವೆ. ಅದರೆ ಕೆಲವೊಂದು ಆಚರಣೆಗೆ, ಪದ್ದತಿಗಳ, ಸಂಪ್ರದಾಯಗ ಸರಿ ಉಟ್ಟಾಂತ ಕೇಳಿರೆ, ನಿಮರ್ಷೆ ಮಾಡಿಕೋದರೆ ಹಿಂದೆನೊವ್ಕೆ; ಅಷ್ಟೇ ಸಿಟ್ಟ್ ಬಂದದೆ. ಇಂವ ಬಾರೀ ಕಲ್ತಂವ, ಇಲ್ಲರೆ; ಇವಂಗೇ ಎಲ್ಲಾ ಗೊತ್ತೊಳದ್, ಮೊನ್ನೆ ಮೊನ್ನೆ ನಮ್ಮೆದುರೇ ಹುಟ್ಟಿ ಬಂದಂವ ಈಗ ನಾವ್ಗೇ ಹೇಳಿಕೆ ಹೊರ್ಟುಟು, ಇಂತದೆಲ್ಲಾ ನಮ್ಮ ಹಿರಿಯೊವು ಮಾತಾಡ್ದರ ನಾವು ಕೇಳುವೆ. ಆದರೆ ಯಾವುದೇ ಸಂಪ್ರದಾಯ, ಪದ್ದತಿ, ನಡವಳಿಕೆಗ ಕೆಲವೊಮ್ಮೆ ಅರ್ಥಹೀನಂತ ಆಕನ ನಾವುಗೂ ಕಿರಿಕಿರಿ ಅದು ಸತ್ಯ. ಹಿಂದೆನ ಕಾಲಲಿ ಒಬ್ಬೊಬ್ಬನೇ ಬುದ್ದಿವಂತ ಅಂತ ಅನಿಸಿಕಂಡ್ ಇದ್ದದರ್‌ಂದ ಅಥವಾ ಒಬ್ಬ ಹೇಳ್ದರನೇ ಬಾಕಿ ಉಳ್ದುವೊ (ಕುಟುಂಬಲಿ ಹಿರಿಯರಾದೊವು) ಕೇಳೊಕುಂತ ಇದ್ದದರ್‌ಂದ, ಅಥವಾ ಯಾವುದ್ದರ್ರು ಯಾಕೆ ಅಂತ ಪ್ರಶ್ನೆ ಮಾಡ್ದು ತಪ್ಪು ಅಂತ ತಿಳ್ಕಂಡದರ್‌ಂದನೋ ಎನೋ ಎಲ್ಲವು ಒಪ್ಪಿಕಂಡ್ ನಡಿತಾ ಇದ್ದೊ.

ಆದರೆ ಈಗ ಹಾಂಗಿಲ್ಲೆ ಬರ್ತ್ ಬರ್‌ತ್ತಾ ಕಾಲ ಬದಲಾತ್. ಪ್ರತಿಯೊಬ್ಬ ಮನ್ಸೊಂಗೂ ತಿಳಿವಳಿಕೆ ಬಾತ್. ಎಲ್ಲವೂ ವಿಜ್ಞಾನ, ತಂತ್ರಜ್ಞಾನಗಳ ಓದಿಕೆ ಶುರು ಮಾಡ್ದೊ. ಈ ಕಾಲಲಿ ಯಾವುದೇ ವಿಚಾರಗಳ ವಿಮರ್ಶೆ ಮಾಡಿಕೆ ಶುರುಮಾಡ್ದೊ. ಇದರ್‌ಂದಾಗಿ ನಾವ್ಗೆ ಯಾವುದು ಬೇಕು ಯಾವುದು

ಬೇಡಾಂತ ತೀರ್ಮಾನ ಮಾಡಿಕೆ ಜನ ಶುರುಮಾಡ್ದೊ. ನಮ್ಮ ದೇಶದ ಪ್ರಸಿದ್ಧ ವಿಜ್ಞಾನಿ ಅನಿಸಿಕೊಂಡೊವು ಈ ದೇಶದ ರಾಷ್ಟ್ರಪತಿಯಾಗಿ ಹೊರ ಹೊಮ್ಮಿದೊವು. ಜಾತಿ – ಧರ್ಮದ ಬಗ್ಗೆ ಹೆಚ್ಚ್ ಲೆಕ್ಕಾಚಾರ ಹಾಕದೊವು ಡಾ. ಅಬ್ದುಲಾ ಕಲಾಂ. ಅವು ಕೂಡಾ ಕೆಲವೊಂದು ನಂಬಿಕೆ ಸಂಪ್ರದಾಯಗಳ ಅವರ ಜೀವನಲಿ ಅಳವಡಿಸಿಕೊಂಡುವು. ಒಂದು ಕಡೆ ಒಂದು ಮಾತ್ ಹೇಳುವೆ, ಮಕ್ಕ ತೇಳಿರೆ ಅವ್ಕೆ ಬಾರಿ ಇಷ್ಟ. ಎಷ್ಟೇ ದೊಡ್ಡ ಹುದ್ದೆಲಿದ್ದರೂ ಅವು ಮುಂದೆ ಮಾಸ್ಟ್ರ ಆಗಿದ್ದೊ. ಹಾಂಗಾಗಿ ಅವು ಆಗಾಗ ಹೋದಲ್ಲಿ ಮಕ್ಕಳ ಸೇರ್ಸಿಕಂಡ್, ಕೆಲವು ಕಥೆ, ವಿಜ್ಞಾನ, ಕ್ರೀಡೆ, ಶಿಕ್ಷಣಾಂತ ವಿಚಾರ ವಿನಿಮಯ ಮಾಡ್ತಿದ್ದೊ. ಹಾಂಗೊಂದು ಕಡೆ ಮಕ್ಕಳೊಟ್ಟಿಗೆ ಕೂಡಿ ಮಾತಾಡಿಕ್‌ಂಡ್ ಇರಿಕನ ಒಂದು ಹೈದ ಕೇಳ್ತ್‌ಗಡ. ಈ ದೇಶದ ಶುರುನ ವಿಜ್ಞಾನಿ ಯಾರ್‌ಂತ? ಅದ್ಕೆ ಅವು ಯೋಚನೆ ಮಾಡಿ ಉತ್ತರ ಹೇಳ್ದಗಡ. ಅಂದರೆ ಪ್ರಶ್ನೆ ಕೇಳ್ದ ಮಕ್ಕಳಿಗೂ, ಬೇಜರ ಆಕೆ ಬೊತ್ತ್. ಹಾಂಗೆಂತ ಉತ್ತರ ಸುಳ್ಳು ಆಕೆನೂ ಬೊತ್ತ್. ಈ ದೇಶದ ಶುರುನ ವಿಜ್ಞಾನಿಗಳೇ ಮಕ್ಕಂತ ಉತ್ತರ ಹೇಳ್ದಗಡ. ಯಾಕೆಂತ ಹೇಳಿರೆ ಯಾರ್ ಪ್ರಶ್ನೆ ಕೇಳುವೆನೋ ಅವೇ ವಿಜ್ಞಾನಿಗ. ಹೆಚ್ಚು ಹೆಚ್ಚು ಪ್ರಶ್ನೆ ಕೇಳ್ದೇ ಮಕ್ಕ. ಹಾಂಗಾಗಿ ಮಕ್ಕಳೇ ಈ ದೇಶದ ಶುರುನ ವಿಜ್ಞಾನಿಗಂತ ಉತ್ತರ ಹೇಳ್ದೊ. ಮಕ್ಕಳಿಗೆಲ್ಲಾ ಕುಷಿ ಆತ್. ಚಪ್ಪಾಳೆ ತಟ್ಟಿ ಕುಷಿಂದ ಕುಣ್ದ ಗಡ.

ಈ ವಿಷಯನ ಈ ಕಥೆಲಿ ಯಾಕೆ ತಂದೆಂತ ಹೇಳಿರೆ ಅಂಥದೇ ಪ್ರಶ್ನೆ ಕೇಳುವ ಕಥೆ ಇದರ್‌ಲ್ಲಿ ಉಟ್ಟು. ಅಬ್ದುಲ್ ಕಲಾಂ ಹೇಳ್ದಾಂಗೆ ಪ್ರಶ್ನೆ ಕೇಳಿ ಉತ್ತರ ಸಿಕ್ಕುದು ವಿಜ್ಞಾನ, ಉತ್ತರ ಸಿಕ್ಕಾದೇ ಇರ್ದುರ ನಾವು ನಂಬಿಕೆ, ಮೂಢನಂಬಿಕೆಂತಲೂ ಕರ್ದವೆ. ಅದರೆ ಎಲ್ಲರ ಮೂಢನಂಬಿಕೆಂತ ತಳ್ಳಿ ಹಾಕಿಕೆ ಅದುಲೆ, ಯಾಕೆ ತೇಳಿರೆ ನಾವು ದೇವುರ ನಂಬುವೆ. ವಿಜ್ಞಾನ ಪ್ರಕಾರ ದೇವುರ ಯಾರಿಗೂ ಪ್ರತ್ಯಕ್ಷ ತೋರ್ಸಿಕೆ ಅದುಲೆ. ದೇವುರ ಕಲ್ಲ್‌ಲಿ, ಮೂರ್ತಿಗಳ್ಲಿ, ಮರ, ಕಾಡ್, ನೀರ್, ಪ್ರಾಣಿ, ಹಕ್ಕಿಗಳ್ಲಿ ತೋರ್ಸಿಕೆ ಅದೆ. ಹಾಂಗೆಂತ ಇದರೊಂದು ನಂಬಿಕೆಂತ ನಾವು ಕರ್ದವೆ. ಈ ನಂಬಿಕೆಗಳ್ಲಿ ಕೆಲವೊಂದು ಆಚರಣೆಗ ಬಾಕನ ಅದರ ಪ್ರಶ್ನೆ ಮಾಡಮೊಂತ ಅದೆ. ಉದಾ: ಗುಳಿಂಞಾನ ಹರ್ಕೆನ ಉಂಬಕೆ ಹೆಣ್ಮಕ್ಕ ಬಾಕೆ ಬೊತ್ತ್. ಕೂಜು ದೆವ್ವನ ಹೆಣ್ಮಕ್ಕ ನೋಡಿಕೆ ಬೊತ್ತ್, ಕೆಲವೊಂದು ನೇಮ ನಡಾವಳಿಗಳಿಗೆ ಹೆಣ್ಮಕ್ಕ ಬಾಕೆ ಬೊತ್ತ್ ಹೀಂಗೆಲ್ಲಾ ನೋಡಿಕನ ಇದ್ ಕುರುಡು ಸಂಪ್ರದಾಯಂತ ಅನ್ಸಿದೆ, ಅಂದರೆ ಕೆಲವು ಸ್ವಾರ್ಥ ಸಾಧನೆಗಾಗಿ ಯಾರೋ ಹುಟ್ಟು ಹಾಕಿದ ಆಚರಣೆಗಳ ನಾವು ಇಂದಿಗೂ ವಿಮರ್ಶೆ ಮಾಡದೆ ಒಪ್ಪಿಕೊಂಡು ಬಂದೊಳೊಂತ ಇದರ ಅರ್ಥ ಇಂಥದೇ ಒಂದು ಕಥೆ ಇಲ್ಲಿಟ್ಟು.

ಒಂದು ಬ್ರಾಹ್ಮಣನ ಮನೇಲಿ ದಿನ ನಿತ್ಯ ಅವರ ಮನೆ ದೇವ್ರುಗೆ ಪೂಜೆ ಆಗ್ತಾ ಇತ್ತ್. ಆ ಮನೆನ ಭಟ್ರ್ ದೊಡ್ಡ ದಡೂತಿ ಜಿವ್ವದವಾಗಿದ್ದಗಡ. ದಿನಲೂ ಪೂಜೆ ಮಾಡಿ ದೇವ್ರುಗೆ ಅಡ್ಡ ಬೀಳಿಕನ ಬಟ್ರ ಕಚ್ಚೆ ಬಿಚ್ಚಿ ಹೋಗ್ತಿತ್‌ಗಡ. ಇದರ ಸಣ್ಣ ಮಳಿ ದೂರಂದ ನಿತ್ತ್ ನೋಡ್ತಾ ಇತ್ತ್. ಒಂದು ದಿನ ಇದ್ದಕಿದ್ದಾಂಗೆ ಆ ಭಟ್ರ್ ಹಾರ್ಟ್ ಎಟಾಕ್ ಆಗಿ ಸತ್ತ್ ಹೋದ ಗಡ. ಜೀವ ಇರಿಕಾಕನ ಬಟ್ರ ಮಳಿ ದೇವ್ರುಗೆ ಅಡ್ಡ ಬೀಳ್ಕನ ಕಚ್ಚೆ ಯಾಕೆ ಬಿಚ್ಚೊಕುಂತ ಕೇಳ್ತ್‌ಲೆ. ಮತ್ತೆ ಅವರ ಮನೆ ದೇವ್ರು ಪೂಜೆ ಈ ಮಳಿ ಮಾಡಿಕೆ ಶುರು ಮಾಡ್ತ್. ಅಂವ ಅಪ್ಪನಾಂಗೆ ದೊಡ್ಡ ಜೀವ ಅಲ್ಲ, ತುಂಬಾ ಸಪೂರ ಆಗಿ ಇತ್ತ್. ಅಂವ ಪೂಜೆ ಮಾಡಿ ಅಡ್ಡ ಬೀಳ್ಕನ ಕಚ್ಚೆ ಬಿಚ್ಚಿ ಹೋಗ್ತಾ ಇತ್ತ್‌ಲೆ. ಆದರೆ ದೇವ್ರುಗೆ ಅಡ್ಡ ಬೀಳ್ಕನ ಕಚ್ಚೆ ಬಿಟ್ಟುದೇ ಒಂದು ಸಂಪ್ರದಾಯಂತ ಅಂವ ತಿಳ್ಕಂಡ್; ಅಡ್ಡ ಬೀಳಿಕೆ ಮುಂದೆ ಅಂವ ಕಚ್ಚೆನ ಬಿಚ್ಚಿ ಅಡ್ಡ ಬೀಳ್ತಿತ್‌ಗಡ. ಹಾಂಗೇ ಇನ್ನೊಂದು ಕಥೆ ಸಹ ಇಂತದೇ ಉಟ್ಟು. ಅದ್ ತೇಳಿರೆ ಒಂದು ಭಟ್ರ ಮನೇಲಿ ದಿನಾಲೂ ಪೂಜೆ ಮಾಡಿಕಾಕನ ಭಟ್ರ್ ಕೊತ್ತಿನ ಕಟ್ಟಿ ಹಾಕಿ ಪೂಜೆ ಮಾಡ್ತಿದ್ದೊಗಡ. ಅದ್ ಯಾಕೆ ತೇಳಿರೆ ಭಟ್ರ್ ದೇವ್ರುರ್‌ಗೆ ಪೂಜೆ ಮಾಡಿಕೆ ಮುಂದೆ ನೈವೇದ್ಯ, ಹಾಲ್ ಎಲ್ಲಾ ಇಸುತ್ತಿದ್ದೋಗಡ. ಬಟ್ರ್ ಪೂಜೆ ಮಾಡಿಕ್‌ಂಡ್ ಇದ್ದಾಂಗೆ ಈ ಕೊತ್ತಿ ಬಂದ್ ನೈವೇದ್ಯನ, ಹಾಲ್‌ನ ಎಲ್ಲಾ ನೆಕ್ಕ್‌ತ್ತಿತ್‌ಗಡ. ಹಾಂಗೆ ಕೊತ್ತಿನ ಕಟ್ಟಿ ಹಾಕಿ ಪೂಜೆ ಮಾಡ್ತಿದ್ದೊ. ಇದರ ಕೂಡಾ ಅಲ್ಲಿನ ಭಟ್ರ ಮಳಿ ನೋಡ್ತಾ ಇತ್ತ್. ಅಂವನೂ ಕೊತ್ತಿನ ಯಾಕೆ ಕಟ್ಟಿ ಹಾಕುದುಂತ ಕೇಳ್ತ್‌ಲೆ. ಮುಂದೆನ ಕಥೆನಾಂಗೆ ಅವನ ಅಪ್ಪನೂ ಒಂದು ದಿನ ಇದ್ದಕ್ಕಿದ್ದಾಂಗೆ ತೀರಿ ಹೋದೋ. ಮತ್ತೆ ಅ ಕೊತ್ತಿನೂ ಅ ಸಮಯಲಿ ಅಕಸ್ಮಾತ್ ಆಗಿ ಸತ್ತ್ ಹೋತ್‌ಗಡ. ಈ ಭಟ್ರ ಮಳಿ ಬೇರೆ ಮನೆಂದ ಕೊತ್ತಿ ತಂದ್ ಅದರ ಕಟ್ಟಿ ಹಾಕಿ ಪೂಜೆ ಮಾಡಿಕೆ ಶುರು ಮಾಡ್ತ್‌ಗಡ.

ಈ ಎರಡ್ ಕಥೆಗಳ್ಳಿ ಬರುವ ಆಚರಣೆಗಳ ನಾವು ಒಪ್ಪಿಕಾಂಕೆ ಅದುಲೆ. ಇದರ ನಾವು ನಂಬಿಕೆ ಅಲ್ಲಿ ಮೂಡನಂಬಿಕೆಂತ ತಿಳ್ಕಂಡ್ ಅಂಥ ಅಚರಣೆಗಳ ಕೈ ಬುಡೋಕಾದೆ ತೇಳ್ದು ಈ ಕಥೆನ ಮೂಲ ಉದ್ದೇಶ.

****

# 17. ಕಲ್ಲ್‌ನ ಮೂರ್ತಿ



ಹಿಂದೆನ ಕಾಲದ ಮೊನ್ಸರ್ ಬಾರೀ ಕಷ್ಟಗಾರರ್‌ಂತ ಒಂದು ಮಾತ್ ಉಟ್ಟು. ಆದ್ ಸತ್ಯ ಕೂಡಾ. ಯಾಕೆ ತೇಳಿರೆ ಮುಂದೆನ ಕಾಲಲಿ ಒಂದು ಜಾಗೆನ ತಟ್ಟ್ ಮಾಡಕೊರೆ ಕೊಟ್ಟು, ಪಿಕ್ಕಾಸ್, ಸಬ್ಬಾಲ್‌ಂತ ಹತ್ಯಾರ್‌ಗಳ ಹಿಡ್ಡ್‌ಂಡ್ ತಿಂಗಳ ಕಟ್ಟಳೆ ಕೆಲ್ಸ ಮಾಡೋಕು. ಲೋಡ್ ಲೋಡ್ ಮೊಣ್ಣು, ಕಲ್ಲ್‌ನ ತಲೆಗೆ ಮೊಡ್ಪಲೆ ಇಸಿಯೇ ಹೊರೋಕು. ಒಂದು ಗದ್ದೆ ಬೇಸಾಯ ಮಾಡೋಕುತಾದರೆ ಎತ್ತ್ ಕಟ್ಟಿಯೇ ಹೂಡೋಕು.. ಗದ್ದೆಗೆ ಸೊಪ್ಪು ಬೇಕರೆ ಕಾನಕ್ಕೆ ಹೋಗಿ ಸೊಪ್ಪು ಕೊಯ್ದು, ಹೊತ್ತ್‌ಕ್‌ಂಡ್ ಬಂದ್ ತಲೆ ಹೊರೆಲಿನೇ ಗದ್ದೆಗೆ ಹಾಕೋಕು. ಮನೇಲಿ ಕಿಚ್ಚಿ ಮಾಡಿಕೆ ಸೌದೆ ಬೇಕುತಾದರೆ ಕಾಡ್‌ಂದ ಹೆಣ್ಮಕ್ಕಳಿಗೆ ಮುರ್ದು ಬಿದ್ದ ಮರಗಳ ಗೆಲ್ಲ್‌ಗಳ, ಕಡ್ಪ್‌ತ್ತಿ ತಕ್ಕಂಡ್ ಹೋಗಿ ಕಡ್ದ್, ಹೊರೆ ಕಟ್ಟಿ ತಲೇಲಿ ಹೊತ್ತ್ ತಂದ್ ಮನೆ ಹಕ್ಕಲೆ ಸೌದೆ ಕೊಟೆಗೆಲಿ ಒಟ್ಟೊಕು. ಬೊಳ್ಪು ಬೊಳ್ಪುಗೆ ಎದ್ದ್ ಭತ್ತನ ಒಣ್ಕೇಲಿ ಮಿದ್ದ್ ಅಕ್ಕಿ ಮಾಡಿಯೇ ಉಣೂಕು. ಹತ್ತ್ ಹನ್ನೆರ್‌ಡ್ ಕೋಲು ಬಾಮಿಂದ ನೀರ್ ಎಳ್ದ್ ಮನೆ ಖರ್ಚಿಗೆ ಉಪಯೋಗ್ಸಿಕೂ. ಪಾರೆ ಕಲ್ಲ್‌ಲಿ ಸೀರೆಗಳ, ಒಲ್ಲಿಗಳ ರಾಶಿ ಹಾಕಿ ನೆರೆವೊಳು, ಸೀಗೆ ಕಾಯಿಲಿ ಪಾರೆಗೆ ಬೊಡ್ದ್ ಒಗ್ಯೋಕು. ಮನೆಲಿದ್ದ ಮೊಣ್ಣುನ ಮಡ್ಕೆ, ಅಳೆಗೆಂತ ಬೂದಿ ಹಾಕಿ ಲಾಯಿಕ್ ಉಜ್ಯೋಕು. ಮನೆಗೆಲ್ಲ ಮೊಣ್ಣು ಎದ್ದಲಿಗೆ ಆಗಾಗ ಸೆಗಣಿ ಹಾಕಿ ಉಜ್ಯೊಕು. ನೆಟ್ಟಿ ಗದ್ದೇಲಿ ಮೆಣ್ಸ್, ನೆಟ್ಟಿಕಾಯಿಗಳಿಗೆ ದೊಡ್ಡ ದೊಡ್ಡ ಮೊಣ್ಣ್‌ನ ಗಡ್ಗೇಲಿ ಕೆರೆಂದ ನೀರ್ ತಂದ್ ಹೊಯ್ಯೋಕು. ಹೀಂಗೆ ಕೆಲ್ಸನ ಮಾಡಿಕ್‌ಂಡ್ ಹೋದರೆ ಅವುಕೆ ಪಾಪ ಪುರುಷೊತ್ತೊ ಇಲ್ಲೆ.

ಹಾಗೆಂತ ಈಗನೋವು ಅಂದರೆ ಸೋಮಾರಿಗಳನೋ. ಖಂಡಿತ ಇಲ್ಲೆ. ಯಾಕೆಂತೇಳಿರೆ ಹಿಂದೆನ ಕಾಲಲಿ ಮೊನ್ಸಂಗೆ ಪ್ರಧಾನವಾಗಿ ಇದ್ದದ್ ಬೇಸಾಯ. ಅದ್ ಮುಗ್ದ ಮೇಲೆ ಅಂವ ಫ್ರೀ. ಉಳ್ದ ಸಮಯನ ಆಗನ

ಕಾಲಲಿ ಬೇಟೆಗೆ ಹೋದ್ದೋ, ಇಲ್ಲರೆ ಕುಷಾಲ್‌ಗಾಗಿ ತಾಳಮದ್ದಳೆ, ಬಯಲಾಟಗಳಿಗೆ ಹೋತಿದ್ದೊ, ಅಲ್ಲರೆ ಕೋಳಿಕಟ್ಟ, ಜುಗಾರಿಂತ ಸಮಯ ಕಳೇತಿದ್ದೊ. ಅದರೆ ಆಗ ಒಬ್ಬೊಬ್ಬನ ಹಕ್ಕಲೆ ಹತ್ತಿಪ್ಪತ್ತ್ ಎಕ್ರೆ ಜಾಗೆಗ ಇರ್ತಿತ್. ಗದ್ದೆ ಬೇಸಾಯ ಮಾಡ್ತಿದ್ದೊ. ಗದ್ದೆ ಕರೆಗಳಿಗೆ ಮಾತ್ರ ಬೆದ್‌ರ್ ತಟ್ಟೇಲಿ ಬೇಲಿ ಹಾಕಂತಿದ್ದೊ. ಒಳ್ದ ಜಾಗೇಲಿ ಕುಮೇರಿ ಬಿತ್ತ್‌ತ್ತಿದ್ದೊ. ಇಲ್ಲರೆ ಸೊಪ್ಪುಗೆಂತ ಕಾಡ್ ಬೆಳ್ಸುದು ಮಾಡಿಕ್‌ಂಡ್ ಇರ್ತಿದ್ದೊ. ಇಂದ್ ಅದೇ ಜಾಗೆಗ; ಅವ್ಕೆ ಮಕ್ಕ ಆಗಿ, ಮಕ್ಕಳಿಗೆ ಮಕ್ಕ ಆಗಿ, ಪಾಲ್ – ಪಾಲ್ ಆಕನ ಒಬ್ಬೊಬ್ಬಂಗೆ 5–6 ಎಕ್ರೆ ಬಂದರೆ ಅದ್ ಬಾರೀ ದೊಡ್ಡ ಲೆಕ್ಕ. ಇನ್ ಕೆಲವುಕೆ ಸೆನ್ಸ್ ಲೆಕ್ಕಲಿ ಪಾಲ್‌ಲಿ ಬಂದದರ್ಲಿ (ತುಂಬ ಮಕ್ಕ ಇರುವುಕೆ) ಮನೆ ಕಟ್ಟಿಕ್‌ಂಡ್ ವಾಸ ಮಾಡ್ತಾ ಒಳೊ. ಹಿಂದೆನವು ಬೊದ್ಕಿದರ್‌ಂದ ಲಾಯಿಕ್‌ಲಿ; ಈಗನೋವು ಬೊದ್ಕುವೆ. ಅಷ್ಟೆಲ್ಲಾ ಇದ್ದರೂ ಆಗ ನೋವುಕೆ ಸರಿಯಾದ ಮನೆ ಇರ್ತ್ತಿಲೆ ಹುಲ್ಲು – ಸೋಗೆ ಹಾಕ್‌ಂಡ್ ಬೆದರ್‌ನ ಮಾಡ್‌ಲಿ, ಮಣ್ಣ್‌ನ ಗೋಡೆಲಿ ಇರ್ತಿದೊ. ಮನೆಲಿ ಕರೆಂಟ್, ಪೋನ್‌ಂತ ಇಲ್ಲೆ. ಸೀಮೆಎಣ್ಣೆ ದೀಪ ಹೋಸಿಕ್‌ಂಡ್ ಕತ್ತಲೆನ ಕಳೆತಿದ್ದೊ. ಒಂದು ತೋರ್ತು, ಒಂದು ಮುಂಡಾಸ್ ಇದ್ದರೆ ಸಾದಾರಣ ಜಂಬರಗಳ ಕೂಡಾ ಮುಗ್ಸ್‌ತಿದ್ದೊ. ಹೆಣ್ಮಕ್ಕಳಿಗೆ ಮೈ ಮುಚ್ಚಾ ಉಡಿಕೆ ಸೀರೆ ರೌವಿಕೆಗೆ ಬಂಗ ಇತ್ತ್. ಮೊಂದ್ರಿ, ಹೊದ್ಯಾಕೆ ಒಲ್ಲಿ ಸರಿಗಟ್ಟ್ ಇರ್ತ್ತಿಲೆ. ಕುದ್ರಿಕೆ ಕುರ್ಚಿ, ಬೆಂಚಿತ ಇರ್ತ್ತಿತ್ತ್‌ಲೆ. ಮನೆಗಳ್ಲಿ 3–4 ಮಣೆಗ ಇದ್ದರ್, ಅದ್ ದೊಡ್ಡ್ ಸಂಗತಿ ಅಂದರೆ ಒಟ್ಟ್‌ಲಿ ಈಗನಾಂಗೆ ಅಧುನಿಕ ಸೌಕರ್ಯ ಯಾವುದೂ ಇಲ್ಲೆ.

ಮೇಲೆ ಹೇಳ್ದಾಂಗೆ ಈಗನೋವು ನಮ್ಮ ಹಿರಿಯರ್‌ಂದ ಲಾಯ್ಕ್ ಯಾಕೆ ಬೊದ್ಕುವೆಂತೇಳಿರೆ ನಾವೀಗ ವಿಜ್ಞಾನ – ತಂತ್ರಜ್ಞಾನಲಿ ಮುಂದುವರ್‌ದೊಳೊ. ಈಗ ಒಂದ್ ಜಾಗೆನ ಸಮತಟ್ ಮಾಡಿಕೆ ಮುಂದೆನೋವು ಒಂದು ತಿಂಗಳ್ ತಕ್ಕಾಂದರ ಈಗ ಜೆಸಿಬಿಲಿ ಅರ್ಧ ದಿನಲಿ ಮುಗಸುವೊ. ಕೃಷಿ ಮಾಡಿರೆ ಬೇಸಾಯ ಮಾಡಿಕೆ ಮಿಷನ್‌ಗಳ ಬಳ್ಸುವೆ. ನೀರ್ ಎಳ್ಯಾಕೆ ಡಿಸಲ್, ಕರೆಂಟ್ ಪಂಪುಗ ಒಳೊ. ಒಡಾಡಿಕೆ ಪ್ರತೀ ಮನೆಗಳ್ಲಿ ವಾಹನಗ ಒಳೊ. ಸೆನ್ಸ್ ಕಟ್ಟಳೆ ಮನೆ ಇರೊವನೂ ಇಂದ್ ಟಾರಿಸ್ ಮನೇಲಿ ಜೀವನ ಮಾಡ್ವೆ, ಊರ್‌ಲಿದ್ದ ಅಂಗಡಿಗೆ ಹೋಕನನೂ ಪೇಂಟ್ ಶರ್ಟ್ ಹಾಕಿ ವಾಹನಲಿ ಓಡಾಡ್ದೆ. ಬೇಕ ಬೇಕಾದರ ಪೇಟೆಂದ ದುಡ್ಡ್ ಕೊಟ್ಟ್ ತಂದ್ ತಿಂದವೇ, ಮನೇಲಿ ಕುದ್ದ್‌ಕ್‌ಂಡ್ ಟಿ.ವಿ, ಮೊಬೈಲ್‌ಂತ ಪ್ರಪಂಚಲಿ ಅದು ಹೋದರ ಮನೆಲೇ ಕುದ್ದ್‌ಕಂಡ್ ನೋಡ್ವೆ. ಅಂದರೆ ಇಷ್ಟಲ್ಲ ಮುಂದುವರಿಯೊಕುತ್ತಿದ್ದರೆ ನಮ್ಮ ಶ್ರಮ ಖಂಡಿತ ಉಟ್ಟುಂತ ಅರ್ಥ. ಅಂದರೆ ಈಗನೊವು ಮುಂದೆನವುಕ್ಕಿಂತಲೂ ಹೆಚ್ಚ್‌ನ ಕಷ್ಟ ಪಟ್ಟವೆ, ಅದರೊಟ್ಟಿಗೆ ಸುಖನೂ ಪಟ್ಟವೆ. 'ಪರಿವರ್ತನೆ ಜಗದ ನಿಯಮ' ತೇಳ್ದಾಂಗೆ ಇನ್ನು ಕೂಡಾ ವರ್ಷ ಹೋದಾಂಗೆ ಹೆಚ್ಚ್ ಹೆಚ್ಚ್ ಮುಂದುವರ್ಕಂಡೇ ಹೋದೆ.

ಆದರೆ ಜೀವನಲಿ ಮನುಷ್ಯಂಗೆ ಒಂದು ಪಾಠಂತ ಅಕುತಾದರೆ ಅಂವ ತುಂಬಾ ಕಷ್ಟಗಳ ಅನುಭವಿಸೋಕು. ನೋವುಗಳ ತಿನ್ನೋಕು ಜೀವನಲಿ ತುಂಬಾ ಪೆಟ್ಟ್ ತಿನೋಕುಂತ ಹಿರಿಯೋವು ಹೇಳುವೆ ಅಂಥ ಒಂದು ಕಥೆ ಈಗ ನೀವ್ಗೆ ನಾ ಹೇಳಿನೆ.

ನಾವೆಲ್ಲ ದೇವ್ರುನ ನಂಬೋವು. ದೇವ್ರು ನಂಬಿಕೆ ನಾವು ಎಲ್ಲಿಗೆ ಹೋದವೆ ತೇಳಿರೆ ದೇವಸ್ಥಾನಕ್ಕೆ ಹೋದವೆ. ಹೆಚ್ಚಿನ ಎಲ್ಲಾ ದೇವಸ್ಥಾನಲಿ ನಮ್ಮ ನಮ್ಮ ಕಲ್ಪನೆನ ದೇವ್ರುಗಳ ಕಲ್ಲ್‌ಲಿ ಕೆತ್ತಿ ಸ್ಥಾಪನೆ ಮಾಡಿದ್ದವೆ. ಕೆಲವು ಕಂಚಿಲಿ, ಬೆಳ್ಳಿ, ಚಿನ್ನಾಂತ ಮೂರ್ತಿಗಳ ಮಾಡ್ದೂ ಉಟ್ಟು. ಅದರೆ ಈ ಕಲ್ಲ್‌ಲಿ ಮಾಡ್ದ ಮೂರ್ತಿ ಬಗ್ಗೆ ಒಂದು ಕಥೆ. ದೇವಸ್ಥಾನದ ಗರ್ಭ ಗುಡಿ, ಕೆಲವು ದೇವಸ್ಥಾನ ಗೋಡೆ, ಮಾಡ್ ಎಲ್ಲ ಕಲ್ಲ್‌ದೆ. ಇಂತದೇ ಒಂದು ದೇವಸ್ಥಾನಲಿ ಕಲ್ಲ್‌ನ ಮೂರ್ತಿಗೆ ಭಟ್ರ್ ಬಂದ್ ಪೂಜೆ ಮಾಡಿ ಬಾಗಿಲ್ ಹಾಕಿ ಹೋದ ಮೇಲೆ. ಆ ದೇವಸ್ಥಾನ ಗರ್ಭಗುಡಿಲಿ ಇರುವ ಅಂದರೆ ದೇವ್ರು ಹಕ್ಕಲೆ ಇರುವ ಮೆಟ್ಟ್‌ಕಲ್ಲ್ ದೆವ್ರೊಟ್ಟಿಗೆ ಕೇಳ್ತ್‌ಗಡ. ಅಲ್ಲ ಮರಾಯ ದೇವ್ರೇ; ಈಗ ನಾ ಮತ್ತೆ ನೀ ಒಂದೇ ಕಡೇ ಹೆಚ್ಚ್ ಕಮ್ಮಿ ಒಂದೇ ಕಲ್ಲ್‌ಂದ ನಿರ್ಮಾಣ ಆದ್. ಅದರೆ ನಿನ್ನ ನಾ ದಿನಾಲೂ ನೋಡಿನೆ. ನಿಂಗೆ ಆ ಬ್ರಾಹ್ಮಣ ಬಂದ್ ನಿನ್ನ ಮೂರು ಹೊತ್ತ್ ಮೀಸಿ, ನಿಂಗೆ ಹೂವುಂದ ಅಲಂಕಾರ ಮಾಡಿ, ನಿಂಗೆ ತಿಂಬಕೆ ನೈವೇದ್ಯ, ಹಣ್ಣ್ ಹಂಪಲ್ ಕುಡ್ಯಾಕೆ ಹಾಲ್, ಜೇನ್, ತುಪ್ಪಂತ ಎಲ್ಲ ಕೊಟ್ಟು. ನಿಂಗೆ ಊದುಪತ್ತಿ ಕರ್ಪೂರಂತ ಆರತಿ ಮಾಡಿ ನಿಂಗೆ ಆಗಾಗ ಅಡ್ಡ ಬಿದ್ದ್ ಎಂತದೋ ಬಾಯಿಲಿ ನಿನ್ನ ಗುಣಗಾನ ಮಾಡಿ ಹೋದೆ. ಇದರೆಲ್ಲ ನೀ ಕಣ್ಣ್ ಮುಚ್ಚಿ ನೋಡಿಯ. ಆದರೆ ನಾ ಒಬ್ಬ ಒಳೆ ನನ್ನ ದಿನಾ ಮೆಟ್ಟಿಕ್‌ಂಡ್ ಅ ಬ್ರಾಹ್ಮಣನ ಕಾಲ್‌ಲಿ ಇದ್ದಾ ಮೊಣ್ಣುನೆಲ್ಲಾ ನಂಗೆ ಮೆತ್ತಿ, ಉಜ್ಜಿ, ನನ್ನ ಮೇಲೆಲ್ಲಾ ಚೊಂಬುಲಿ ನೀರ್ ಹೊಯ್ದ್ ಅವನ ಕಾಲ್‌ನ ಮೊಣ್ಣ್‌ಲಿ ನನ್ನ ಮೇಲೆ ಹರೆವಾಂಗೆ ಮಾಡಿ ನಿನ್ನ ಹಕ್ಕಲೆ ಬಂದದೆ. ಇದೆಂಥ ಅನ್ಯಾಯಂತ ಕೇಳ್ದ್.

ಆಗ ದೇವ್ರುಗೆ ಒಮ್ಮೆ ಪಾಪಂತ ಅನ್ನಿದೆ, ಇನ್ನೊಮ್ಮೆ ನೆಗೆನೂ ಬಂದದೆ. ದೇವ್ರು ಅಷ್ಟೆ ಶಾಂತವಾಗಿ ಈ ಕಲ್ಲ್‌ಗೆ ಹೇಳ್ದ್. ಎನ್ ತೇಳಿರೆ ನೋಡು ಮರಾಯಾ ನಾ ಅಂದ್ ನನ್ನ ಮೂರ್ತಿ ಮಾಡಿಕನ ಒಬ್ಬ ಶಿಲ್ಪಿ ನಂಗೆ ಹೆಚ್ಚ್ ಕಮ್ಮಿ ವರ್ಷ ಕಟ್ಟಳೆ ಮುಟ್ಟಿಲಿ, ಉಳಿಲಿಂತ ಬೊಡ್ದ್, ಬೊಡ್ದ್, ಕೆತ್ತಿ ನನ್ನ ಮಾಡಿಟು, ಆಗ ನಂಗೆ ಬಿದ್ದ ಪೆಟ್ಟ್‌ನ ಲೆಕ್ಕ ಹಾಕಿಕೆ ಸಾಧ್ಯ ಇಲ್ಲೆ. ಆದರೆ ಅಂದ್ ನೀ ಒಂದು ತಿಂಗ ಸಹ ಇಂತ ಪೆಟ್ಟ್ ತೀಂತಿಲೆ. ಹಾಂಗಾಗಿ ನೀ ಮೆಟ್ಟ್‌ಕಲ್ಲ್ ಆಗಿ ಒಳ್ದಳ. ನಿನ್ನ ಸ್ಥಾನ ಅಲ್ಲಿಯೇ. ನಾ ಸಾವಿರಾರ್ ಪೆಟ್ಟ್ ತಿಂದದರ್‌ಂದ ಇಂದ್ ಎಲ್ಲರ ಆರಾಧ್ಯ ದೇವನಾಗಿ ಒಳೆ. ನಂಗೆ ಒಳ್ಳೆ ಸ್ಥಾನ ಮಾನ ಸಿಕ್ಕಿದೆಂತ ಹೇಳ್ದ್. ಆಗ ಮೆಟ್ಟ್‌ಕಲ್ಲ್‌ಗ ಅರ್ಥ ಆದೆ. ಅದೇ ರೀತಿ ಮೊನ್ಸ ಅದ

ನಾವು ಕೂಡಾ ಅಷ್ಟೆ; ಜೀವನಲಿ ಎಷ್ಟ್ ಪೆಟ್ಟ್ ತಿಂದೊಳೊ ತೇಳಿರೆ ಕಷ್ಟ, ಸಮಸ್ಯೆ, ಸಂಕಟಗಳ ಅನುಭವಿಸಿ ಅದರೆಲ್ಲ ಮೆಟ್ಟಿ ಮೇಲೆ ಬಂದಿದ್ದರೆ ಈ ಸಮಾಜಲಿ ಒಬ್ಬ ಒಳ್ಳೆ ವ್ಯಕ್ತಿ ಆಗಿ ಗುರುತಿಸಿಕಂಡವೆಂತ. ಇಲ್ಲೆಂತಾದರೆ ಆ ಮೆಟ್ಟ್‌ಕಲ್ಲ್‌ನಾಂಗೆ ನಮ್ಮ ಬಾಳ್ವೆನೂ ಆದೆ. ಅದ್‌ರ್‌ಂದ ಜೀವನಲಿ ಕಷ್ಟ ಪಟ್ಟ್ ಮುಂದೆ ಬರೋಕು.  ನಾಲ್ಕ್ ಜನಕ್ಕೆ ನಾವು ಗುತ್ತಾಕು. ಕಲ್ಲ್‌ನ ಮೂರ್ತಿ ಪೂಜೆಗೆ ಯೋಗ್ಯರಾದಂಗೆ ನಾವು ಸಹ ಯೋಗ್ಯ ಮನುಷ್ಯಾರಾಕುಂತ ಇದರ ಅರ್ಥ.

****

# 18. ಕುದುರೆ ವ್ಯಾಪಾರ



ಒಂದು ಮನೇಲಿ ಒಂದು ಅಪ್ಪನೂ, ಒಬ್ಬ ಮಙನೂ ವಾಸ ಇದ್ದೋ ಗಡ. ಇಬ್ಬರೇ ಮನೆಲಿರಿಕನ ಅವ್ಕೆ ಬದ್ಕುದು ಹೇಂಗೆಂತ ಯೋಚನೆ ಮಾಡಿ ಅವು ದನ ಸಾಂಕುದು, ಕುದುರೆ ಸಾಂಕುದು ಮತ್ತೆ ಕತ್ತೆ ಸಾಂಕುದು. ಮತ್ತೆ ದೊಡ್ಡದಾದ ಮೇಲೆ ಯಾರಿಗಾರ್ ಮಾರಾಟ ಮಾಡಿ ಅದರ್ಲೇ ಜೀವನ ಮಾಡ್ತಾ ಇದ್ದೋ. ಹೈದನ ಅಯ್ಯೆ ತೇಳಿರೆ ಅಪ್ಪನ ಹೆಣ್ಣ್ ಅದೆಂತದೋ ಕಾಯಿಲೆಲಿ ತೀರಿಹೋತ್‌ಗಡ. ಅಷ್ಟೋತ್ತಿಗೆ ಈ ಹೈದನ ಹೆತ್ತ್ ಎರಡು – ಮೂರು ವರ್ಷ ಆಗಿತ್ತಷ್ಟೇ. ಹೈದನ ಅಯ್ಯೆ ಸತ್ತ ಮೇಲೆ ಇವನ ಅಪ್ಪನೇ ಸಾಂಕಿದ್.. ಎಷ್ಟೋ ಜನ ನೀ ಇನ್ನೊಂದು ಮದುವೆ ಆಗ್ ಮಾರಾಯಂತ ಹೇಳಿರೂ, ಅಪ್ಪ ಮಾತ್ರ ಮಙನ ಮೇಲೇನ ಪ್ರೀತಿಲಿ ಬೇರೆ ಮದುವೆ ಆಕೆ ಒಪ್ಪುತ್ತಿತ್ತಿಲೆಗಡ. ಇನ್ನೊಂದು ಹೆಣ್ಣ್‌ನ ಮದುವೆ ಅದರೆ ನನ್ನ ಕೂಸುನ ಸರಿಯಾಗಿ ನೋಡದಿದ್ದರೆ, ಸಾಂಕದಿದ್ದರೆ, ಅದರ ನಂಗೆ ಸಹಿಸಿಕೆ ಸಾಧ್ಯ ಇಲ್ಲೆ. ಇನ್ನ್ ಬರುವ ಹೆಣ್ಣ್ ಎಂತ ಬಿಕನಾಶಿಂತ ಹೇಳಿಕಾದುಲೆಂತ ಅಪ್ಪ ಒಳ್ಳೆ ತೀರ್ಮಾನನೇ ತಕ್ಕಂತ್. ಇವಂಗೆ ಮೊದುವೆ ಅಗ್‌ತೇಳ್ದವೇ ಈಗ ಹೇಳಿಕೆ ಶುರು ಮಾಡ್ಯೊಳೊ.

ಇವಬ್ಬರೇ ಮನೇಲಿ ಇರ್ದ್ದಾರ್‌ಂದ ಬೇರೆ ಯಾರದೋ ಮನೆಗೆ ಹೋಗಿ ಕೆಲ್ಸ ಮಾಡ್ದರ್‌ಂದ, ಇವರ್‌ದೇ ಮನೇಲೇ ದನ, ಕರ್, ಕತ್ತೆ – ಕುದುರೆಂತ ಸಾಂಕಿಯಂಡ್ ಇರಕ್ಕ್‌ಲ್ಲಾಂತ ತೀರ್ಮಾನ ಮಾಡಿಕ್ಂಡ್ ಜೀವನ ಸಾಗಿಸ್ತಾ ಇದ್ದೊ. ಇಬ್ಬರೂ ಸೇರಿಕಾಂಡ್ ಗಂಜಿ – ಗೈಪು ಮಾಡ್ದು, ಬೊಳ್ಪಿಗೆ ಬೇಕಾರೆ ಎನಾರ್ ರೊಟ್ಟಿನೋ, ಒಡಿಟ್ಟ್‌ನೋ ಮಾಡಿಕಾಂಡ್ ಜೀವನ ಮಾಡ್ತಾ ಇದ್ದೊ. ಕುಡ್ಯಕೆ ಹಾಲ್ – ಮೋಸುರ್‌ಂತ ಎನೂ ಕಮ್ಮಿ ಇತ್ಲೆ. ಬಾಕಿ ಎಲ್ಲ ಕೊರತೆಗಳ ಮರ್ತ್ತರೆ ಇವ್ಕೆ ನೆಮ್ಮದಿಗೇನೂ ತೊಂದರೆ ಇತ್ಲೆ. ಅಪ್ಪನೂ ಮಙನೂ ಹೆಚ್ಚಾಗಿ ಬೇರೆ ಬೇರೆ ಊರ್‌ನ ಸಂತೆಗಳಿಗೆ ಹೋಗಿ

ಅವು ಸಾಂಕಿದ ದನಗಳ, ಕತ್ತೆಗಳ, ಕುದುರೆಗಳ ಮಾರಾಟ ಮಾಡಿಕಾಂಡ್ ಬಾತಿದೋ ಗಡ. ವರ್ಷಕ್ಕೆ ಕಮ್ಮಿ ತೇಳಿರು ಒಂದು ಇಪ್ಪತ್ತೈದು ಜೊತೆ ದನ, ಕರ್, ಕುದುರೆ, ಕತ್ತೆಂತ ಮಾರ್ತಿದ್ದೊ. ಅದರ್ಂದ ಬಂದ ದುಡ್ಡುಲಿ ಹಿಂದಕ್ಕೆ ಪ್ರಾಣಿಗಳಿಗೆ ಬೇಕಾದ ಹಿಂಡಿ, ಅದ್, ಇದ್ಂತ ತರ್ತಿದ್ದೊ. ಒಳ್ದದರ್ಲಿ ಲಾಯಿಕ್‌ಲಿ ಜೀವನ ಸಾಗಿಸ್ತಾ ಇದ್ದೊ. ಊರ್‌ಲಿ ಒಂದು ರೀತಿಲಿ ಇವು ಅತ್ತ ವ್ಯಾಪಾರನೂ ಅಲ್ಲ, ಇತ್ತ ಕೃಷಿಕನೂ ಅಲ್ಲದ ರೀತಿಲಿ ಜೀವನ ಸಾಗಿಸ್ತಾ ಇದ್ದೋ.

ಹೀಂಗೆ ಒಂದು ದಿನ ಆ ಊರ್ಂದ ದೂರಲಿ ಒಂದು ಸಣ್ಣ ಜಾತ್ರೆ ಇತ್ತ್‌ಗಡ ಜಾತ್ರೆಗೆ ಹೋದರೆ ಅಲ್ಲಿ ಖರ್ಚಿಗೆ ದುಡ್ಡು ಆಕುಂತ ಅಪ್ಪನೂ ಮಞನೂ ಒಂದು ಕುದುರೆ ಮರಿನ ಹೊಡ್ಕ್ಂಡ್ ಜಾತ್ರೆಗೆ ಹೊರ್ಟೊ. ಕುದುರೆ ಮರಿ ಅಷ್ಟ್ ದೊಡ್ಡದೂ ಅಲ್ಲ ಹಾಂಗೆಂತ ಬರೀ ಸಣ್ಣದೂ ಅಲ್ಲ. ಅದರ ಮಾರಾಟ ಮಾಡಿರೆ ಜಾತ್ರೆಲಿ ಖರ್ಚಿಗೆ ದುಡ್ಡುನೂ ಅತ್, ಎಲ್ಲವರೊಟ್ಟಿಗೆ ನಾವುನೂ ಜಾತ್ರೆಗೆ ಹೋದಾಂಗೆ ಅತ್ಂತ ತೀರ್ಮಾನ ಮಾಡಿಕಾಂಡ್ ಹೊರ್ಟೊ, ಕುದುರೆ ನೋಡಿಕೆ ಬಾರಿ ಲಾಯಿಕ್ ಇತ್ತ್. ಸುಮಾರು ಕುಪ್ಪುಳು ಬಣ್ಣದ ಆ ಕುದುರೆ ಬಿಸಿಲಿಗೆ ಹೋದರೆ ಅದರ ರೋಮ ಎಲ್ಲ ಚಿನ್ನಾದಾಂಗೆ ಹೊಳ್ಪದು. ಬೆನ್ನ್, ಕುಂಡೆ ಹಞ ಎತ್ತರ ಆಗಿ ಹಿಂದೆಂದ ನೋಡಿಕನ ಬಾರೀ ಪೊರ್ಲು ಕಾಂಬೋತ್ತಿತ್ತ್. ಹಾಂಗೆ ಬಾಲದ ಜೌರಿ ಕೂಡಾ ಒಮ್ಮೆ ಕೈಲಿ ಹಿಡಿಯೊಮೊಂತ ಆಗ್ತಾ ಇತ್ತ್.

ಇಬ್ಬರೂ ಕುದುರೆನ ಹೊಡ್ಕ್ಂಡ್ ಹೊರಟೊ, ಅಪ್ಪ ಹೆಗ್‌ಲ್‌ಲಿ ಒಂದು ಚೀಲ ಕೋಸಿಕ್ಂಡ್ ತಲೆಗೆ ಒಂದು ಮುಂಡಾಸ್ ಕಟ್ಟಿ, ಸೊಂಟಕ್ಕೆ ಒಂದು ತೋರ್ತ್‌ನ ಸುತ್ತಿಕಾಂಡಿತ್ತ್. ಹಾಂಗೆ ಮಞ ಒಂದು ದೊಗಲೆ ಚಡ್ಡಿ, ಅದರ ಮೇಲೆ ಅಪ್ಪಂಗೂ ಕೂಡಾ ಹಾಕುವಷ್ಟ್ ದೊಡ್ಡ ಕುಡ್ತ ಹಾಕಿಕಾಂಡ್, ಕೈಲಿ ಕೋಲು ಹಿಡ್ಕಂಡ್ ಇಬ್ಬರೂ ಹೊರ್ಟೊ ಹೀಂಗೆ ದಾರಿಲಿ ಹೋಕನ ಒಬ್ಬ ಸಿಕ್ಕಿದೋ. ಅವು ಇವರೊಟ್ಟಿಗೆ ಕೇಳ್ದೊ. ಅಣ್ಣಾ ನೀವಿಬ್ಬರ್, ಈ ಕುದುರೆನ ಹೊಡ್ಕಂಡ್ ದೂರಂತ. ಆಗ ನಾವು ಜಾತ್ರೆಗೆ ಹೊರ್ಟೋವು. ಅಲ್ಲಿ ಇದರ ಮಾರಾಟ ಮಾಡೊಮೊಂತ ಹೊರ್ಟದ್ಂತ ಹೇಳ್ದೊ. ಆಗ ಆ ಎದುರ್ ಸಿಕ್ಕಿದಂವ ಹೇಳ್ತ್ ನೀವೇಂತ ಪೆದ್ದರ್ ಕುದುರೆನ ಯಾರಾರ್ ದನ ಹೊಡ್ಕಂಡ್ ಹೋದಾಂಗೆ ಹೊಡ್ಕಂಡ್ ಹೋದವೆನಾ ಅದರ ಮೇಲೆ ನೀವ್ಗೆ ಕುದ್ಕಾಕಣ್‌ಕ್ ಅಲ್ಲಂತ. ಆಗ ಅಪ್ಪನೂ ಮಞನೂ ಓ. ಇದ್ ಸರಿ ನಾವ್ಗೆ ತಲೇಗೇ ಹೋತ್ಲೆಂತ ಹೇಳಿ ಮಞ, ಅಪ್ಪ ನೀವು ಕುದುರೆ ಮೇಲೆ ಕುದ್ರಿಂತ ಹೇಳ್ತ್. ಹಾಂಗೆ ಅಪ್ಪ ಕುದ್ರೆ ಮೇಲೆ ಕುದ್‌ಕಂಡ್ ಸುಮಾರ್ ದೂರ ಹೋಕನ

ಮತ್ತೊಬ್ಬ ಸಿಕ್ಕಿತ್. ಅಂವ ಇವರೊಟ್ಟಿಗೆ ಕೆಳ್ತ್. ಎಲ್ಲಿಗೆ ಹೊರ್ಟದ್‌ಂತ. ಇವು ವಿಷಯ ಹೇಳ್ದೊ. ಆಗ ಅಂವ ಹೇಳ್ತ್ ನೀ ಎಂತ ಅಪ್ಪ ಮಾರಾಯ. ನಿನ್ನ ಮಣಿನ ನಡ್ಸಿಕಂಡ್ ನೀ ದೊಡ್ಡ ರಾಜನಾಂಗೆ ಹೋಗ್ತಾ ಒಳಲ್ಲಾಂತ ಹೇಳ್ತ್. ಆಗ ಅಪ್ಪ ನೆನ್ಸಿತ್ ಹೌದು ಪಾಪ ನನ್ನ ಮಣಿ ನಡಿತಾ ಉಟ್ಟು. ನಾ ಇಷ್ಟ್ ಪ್ರೀತಿಲಿ ಸಾಂಕಿದ ಮಣಿನ ನಡ್ಸಿಕಂಡ್ ನಾ ಕುದುರೆ ಮೇಲೆ ಹೋದು ಸರಿ ಅಲ್ಲಂತ ಯೋಚನೆ ಮಾಡಿ ಅಂವ ಕುದುರೆಂದ ಇಳ್ತ್.

ಮಣಿ ನೀ ಕುದುರೆ ಮೇಲೆ ಕುದ್ದ್‌ಕಾ. ನಾ ನಡ್ಕಂಡ್ ಬನ್ನೆ ನೀ ಇನ್ ಸಣ್ಣಂವ ನಂಗೆ ನಡ್ದ್ ಅಭ್ಯಾಸ ಉಟ್ಟುಂತ ಹೇಳ್ತ್. ಆಗ ಮಣಿ ಬೇಡ ಅಪ್ಪ ನೀವೇ ಕುದ್ರಿಂತ ಹೇಳಿರೂ, ಅಪ್ಪ ಒಪ್ಪದೇ ಒತ್ತಾಯ ಮಾಡಿ ಮಣಿನ ಕುದುರೆ ಮೇಲೆ ಕುದ್ರಿಸಿತ್. ಹಾಂಗೆ ಅಪ್ಪ ಕುದುರೆ ಹಿಂದೆಂದ ನಡ್ಕಂಡ್, ಮಣಿ ಕುದುರೆ ಮೇಲೆ ಕುದ್ದ್‌ಕಾಂಡ್ ಹೋಕನ ಹಿಂದಕೊಬ್ಬ ಎದ್‌ರ್ ಸಿಕ್ಕಿತ್. ಅಂವ ಇವರೊಟ್ಟಿಗೆ ಹೊರ್ಟ ವಿಚಾರ ಮಾತಾಡ್ತ್. ಆಗ ಇದ್ದ ವಿಷಯ ಇವು ಹೇಳ್ದೊ. ಅಗ ಅಂವ ಹೇಳ್ತ್ ಎಂತ ಮೂರ್ಖ ಮಣಿ ನೀ. ಪ್ರಾಯ ಆದ ಅಪ್ಪನ ನಡ್ಸಿಕಂಡ್ ನೀ ಕುದುರೆ ಮೇಲೆ ಕುದ್ರಿಕೆ ನಾಚಿಕೆ ಆದುಲೆನಾ ನಿಂಗೆ, ಥೂ ನಿನ್ನ ಹಾಂಕರಕ್ಕೆಂತ ಬೊಯ್ತ್. ಆಗ ಅಪ್ಪ ಹೇಳ್ದೊ. ಇಲ್ಲೆ ಅಣ್ಣ ನಾನೇ ಅವನ ಒತ್ತಾಯ ಮಾಡಿ ಕುದ್ರಿಸಿದ್. ಹಾಂಗೆ ಕುದ್ದಾದ್‌ಂತ ಹೇಳಿಕನ ಇಂವ ಮತ್ತಷ್ಟ್ ಜೋರ್‌ಲಿ, ನಿಮ್ಮಂತವು ಇದ್ದೆ ಈ ಪ್ರಪಂಚಲಿ ಮಕ್ಕ ಹಾಳಾದ್. ಅದ್ ಕುದುರೆ ಅಲ್ಲ. ನೀವು ನಡ್ಕಂಡ್ ಹೋದರ್‌ಂದ ಅದರ ಮೇಲೆ ಇಬ್ಬರಿಗೂ ಕುದ್ದ್‌ಕಂಡ್ ಹೋಕಲ್ಲ, ಇಬ್ಬರು ಕುದ್ದರೆ ಅದೇನಾ ಸತ್ತಾದೆನಾಂತ ಜೋರು ಸ್ವರಲಿ ಹೆಳ್ತ್. ಆಗ ಅಂವ ಹೇಳ್ದ್ ಸರಿಂತ ಇಬ್ಬರಿಗೂ ಅನ್ಸಿತ್. ಮಣಿ ಮುಂದೆ ಅವನ ಹಿಂದೆ ಕುದುರೆ ಮೇಲೆ ಅಪ್ಪ ಹೀಂಗೆ ಇಬ್ಬರೂ ಕುದುರೆ ಮೇಲೆ ಹತ್ತಿ ಕುದ್ದೊ. ಹನಿಸ್ ದೂರ ಹೋಕನ ಕುದುರೆ ಅಸ – ಮಸ ಆತ್. ಅಷ್ಟೊತ್ತಿಗೆ ಒಬ್ಬ ಎದ್‌ರ್‌ಂದ ಬಂದಂವ ಇವರ ನೋಡಿ; ಇವ್ಕೆ ಬಾಯಿಗೆ ಬಂದಾಂಗೆ ಬೊಯ್ತ್. ನೀವು ಮನ್ಸರೇ ಅಲ್ಲ. ಪಾಪ ಆ ಮೊರಿ ಕುದುರೆನ ಮೇಲೆ ನೀವಿಬ್ಬರೂ ಹತ್ತಿ ಕುದ್ದ್‌ಕಾಂಡ್ ಹೋದರಲ್ಲ. ಅದ್ಕೆ ಬೊಚ್ಚಿ ಅದರ ಬಾಯಿಂದ ನೊರೆ ಬರ್ತಾ ಉಟ್ಟು. ಅದ್ಕೆ ಕುಡಿಯಾಕೆ ಆಗಿ ಎಷ್ಟೋತ್ತು ಆಗುಟಾ ಎನೋ ಅಂತ ಬೊಯ್ತ್. ಆಮೇಲೆ ಕೇಳ್ತ್. ನೀವು ಎಲ್ಲಿಗೆ ಹೊರ್ಟ್‌ದ್‌ಂತ. ಆಗ ಅಪ್ಪನೂ ಮಣಿನೂ ವಿಷಯ ಎಲ್ಲ ಹೇಳ್ದೊ. ನಾವು ಕುದುರೆನ ಮಾರಾಟ ಮಾಡಿಕೆ ಹೊರ್ಟಾದ್‌ಂತ ಅಗ ಅಂವ ಹೇಳ್ತ್. ನೀವು ಹೀಂಗೆ ಅದರ ಮೇಲೆ ಕುದ್ದ್‌ಕಾಂಡ್ ಹೋದರೆ ಅದರ ಮಾರಾಟ ಬುಡಿ, ಗುಂಡಿ ಕಡ್ಯೋಕಷ್ಟೆ. ಇನ್ನ್ ಸುಮಾರು ದೂರ ಉಟ್ಟು ಜಾತ್ರೆಗೆ, ನೀವ್ಗೆ ಅದರ ಮಾರಾಟ ಮಾಡೋಕುಂತಾದರೆ ಅದರ ಬೊಡ್ಡೆಗೆ ಕಟ್ಟಿ ಹೊರೋಕಷ್ಟೆಂತ ಹೇಳ್ತ್.

ಹೌದು; ಇವು ಹೇಳ್ದು ಸರಿ. ಯಾಕೆಂತೇಳಿರೆ ಪಾಪ ಆ ಕುದುರೆ, ಮರಿಕುದುರೆ ಇನ್ನ್ ಒಡಲ್ ಗಟ್ಟಿ ಆತ್‌ಲೆ, ಇನ್ನ್ ಅದ್ಕೆ ಬೆಳವಣಿಗೆ ಸುಮಾರ್ ಉಟ್ಟು. ನಾವು ತೊಪ್ಪು ಮಾಡ್ದೋಂತ ಹೇಳಿ ಅಪ್ಪನೂ ಮಣಿನೂ ಕುದುರೆನ ಅಲ್ಲೆ ಒಂದು ದೈಗೆ ಕಟ್ಟಿ ಹಾಕಿ ಅಂವ ಹೇಳ್ದಾಂಗೆ ಬೊಡ್ಗೆ ಕಡಿಯಕೆ ಹೋದೊ. ಹಾಂಗೆ ಒಂದು ಸರ್ಲಿ ಮರದ ಸೊರ್ತ ಇದ್ದ ಬೊಡ್ಗೆನಾ ಕಡ್ದ್ ತಂದೊ. ಅದರೊಟ್ಟಿಗೆ ಒಂದು ನಾರ್‌ಕಣೆ ದಂಟ್‌ನನೂ ಕಡ್ಕಂಡ್ ಬಂದ್ ಅದರ ಎರಡೆರಡ್ ಬಾಗ ಮಾಡಿ ಬೊಳ್ಳಿ ತೆಗ್ದೊ. ಇಬ್ಬರೂ ಸೇರಿ ಕುದುರೆನ ಅಡ್ಡ ಹಾಕಿ ಅದರ ಕೈ ಕಾಲ್ ಕಟ್ಟಿದೋ. ಕುದುರೆ ಮರಿ ಪಾಪ ಬ್ಯಾಂ.... ಬ್ಯಾಂತ ಮರ್ಡಿಕೆ ಶುರುಮಾಡ್ತ್. ಅದರೂ ಅದರ ಕೈ ಕಾಲ್ ಕಟ್ಟಿ ಅದರ ಸೆರೆಗೆ ಈ ಬೊಡ್ಗೆನಾ ಹುಗುಸಿದೊ. ಆ ದಾರಿ ಹೋಗೊಂವ ಹೇಳ್ದಾಂಗೆ ಇಬ್ಬರೂ ಕುದುರೆನ ಹೆಗ್‌ಲ್ ಮೇಲೆ ಹೊತ್ತೊ. ಹೋಗಿ ಹೋಗಿ ಒಂದು ಪರ್ಲಾಂಗ್ ದೂರ ಹೋಕನ ದೊಡ್ಡ ಹಳ್ಳ ಒಂದು ಸಿಕ್ಕಿದೆ. ಅಪ್ಪನೂ ಮಣಿನೂ ಕುದುರೆ ಮರಿನ ಹೊತ್ತ್‌ಕಾಂಡ್ ಅ ಹಳ್ಳನ ದಾಟಿದೊ. ನೊಡು ಹಳ್ಳಕ್ಕೆ ಎತ್ತಿಕಾಕನ ಮಣಿನ ಕಾಲ್ ಜಾರಿ 'ದುಡುಂ'ತ ಹಳ್ಳಕ್ಕೆ ಬೀತ್. ಈ ಅಪ್ಪಂಗೆ ಮಣಿನೂ, ಈ ಕುದುರೆ ಮರಿನೂ ಅದರ್‌ಸಿಕೆ ಅಗದೆ ಅವನು ಬೀತ್. ಅಷ್ಟೊತ್ತಿಗೆ, ಕತ್ತಲೆ ಕತ್ತಲೆ ಆಗಿತ್ತ್ ಎನೆಲ್ಲಾ ತಬ್ಬರ್ಸಿ, ಇಬ್ಬರೂ ಎದ್ದ್‌ರ್‌ಕನ ಕೈ ಕಾಲ್ ಕಟ್ಟದ ಕುದುರೆ ಮರಿ ಸುಮಾರ್ ಕೆಳಗೆ ನೀರ್‌ಲಿ ಪಾಂಬಿಕಂಡ್ ಹೋಗುಟು.

ಏನೆಲ್ಲ ಮಾಡಿ ದೊಣ್ಣೆಲಿ ಹಿಡ್ದ್ ಕುದುರೆನ ನೀರ್‌ಂದ ಎಳ್ಕಂಡ್ ಬರೊಕರೇ ಕೈ ಕಾಲ್ ಕಟ್ಟಿದ ಅದ್ ನೀರ್ ಕುಡ್ದ್ ಸತ್ತೇ ಹೋಗುಟು. ಹಳ್ಳದ ಪುಡೆಗ ಎಳ್ದ್ ತಂದ್ ಕೈ ಕಾಲ್ ಬಿಚ್ಚಿ ನೋಡಿರೆ ಅದ್ ಸತ್ತ್ ಮರಗಟ್ಟಿ ಹೋಗುಟು. ಅಪ್ಪನೂ ಮಣಿನೂ ಮೋರೆ – ಮೋರೆ ನೋಡಿಕಾಂಡ್ ಮರ್ಡಿಕೆ ಶುರು ಮಾಡ್ದೋ. ಹಳ್ಳ ದಾಟಿ ಹೋದರೆ ಮತ್ತೆ ಜಾತ್ರೆ ಕಳಕ್ಕೆ, ಹೋದು ಅಲ್ಲಿಂದ ಎನೋ ಬೊಬ್ಬೆ ಕೇಳ್ತಾ ಉಟ್ಟು. ತೊಟ್ಟಿಲ್‌ನವರಾದ್, ಹೋಟೆಲ್‌ನವರಾದ್, ಸಕ್ಕರೆ ಮಿಠಾಯಿ ಅಂಗಡಿಯವರಾದ, ಸೋಜಿ ಅಂಗಡಿಯೋವು ಸೋಜಿ....... ಸೋಜಿ.....ಂತ ಕರಿಯೋದು ಕೇಳ್ದೆ, ಬುಗ್ಗೆ ಮಾರಾಟದೋವು ಬುಗ್ಗೆಗೆ ನೂಲು ಕಟ್ಟಿ ಹಾರ್ಸುದು ಕೂಡಾ ಲೈಟ್ ಬೊಳ್ಪುಲಿ ಕಂಡದೆ. ಅದರೆ ಇವ್ಕೆ ಇಬ್ಬರಿಗೂ ಅದ್ ಯಾವುದೂ ಬೇಡ. ಚೆನ್ನದಾಂಗೆ ಇದ್ದ ಕುದುರೆ ಮರಿನ ನಾವು ಯಾರ ಯಾರ ಮಾತ್ ಕೇಳಿ ಧರ್ಮಕ್ಕೆ ಕೊಂದೊ ಅಲ್ಲಂತ ಹೇಳಿಕಾಂಡ್ ಮರ್ದೊ.. ಅಪ್ಪಂದ ಜಾಸ್ತಿ ಮಣಿ ಮರ್ಡ್ತಿತ್. ಯಾಕೆಂತೇಳಿರೆ ಅ ಕುದುರೆ ಮೊರಿನೊಟ್ಟಿಗೆ ಅವಂಗೆ; ಹಾಂಗೆ ಕುದುರೆ ಮೊರಿಗೆ ಇವನೊಟ್ಟಿಗೆ ಇದ್ದ ಪ್ರೀತಿ ಅಂತದ್. ಇಂವ ಎಷ್ಟ್ ದೂರಂದ ಅದರ

ಹೆಸರ್ 'ಕೆಮ್ಮಾರಾ'ಂತ ಕರ್ದರೆ ಓಡಿ ಬಾತಿತ್. ಅದರ ಕೊಡಿಕೆ ಸಹ ಮನ್ಸಿಲ್ಲದೆ ಅಂವ ಹೊಡ್ಕಂಡ್ ಬಂದದ್ ಅದರೆ ಇಂದ್ ಅದರ ಕೈಯಾರ ಕೊಂದಾಂಗೆ ಅತ್ ಅವನ ಮನ್ಸ್‌ಗೆ.

ಮರ್‍ಟ್ – ಮರ್‍ಟ್ ಬೊಚ್ಚಿಕಾಕನ ಮಞ ಅಪ್ಪನೊಟ್ಟಿಗೆ ಹೇಳ್ತ್ ಅಪ್ಪ ನಾವು ಶುರುಗೆ ಕುದುರೆ ಮರಿನ ಮಾರಿಕೆಂತ ಹೊಡ್ಕಂಡ್ ಹೊರ್‍ಟ್‌ದ್. ಅದ್ರೆ ದಾರೀಲಿ ಸಿಕ್ಕಿದೋವೆಲ್ಲಾ ಒಂದೊಂದು ರೀತಿಲಿ ಹೇಳ್ದಾಂಗೆ ನಾವು ಅದ್ ಸರಿಂತ ಮಾಡ್ತಾ ಹೋದೊ. ಆದರೆ ನಾವು ನಮ್ಮ ಸ್ವಂತ ಬುದ್ದಿಂದ ಹೊಡ್ಕಂಡೇ ಬಂದಿದರೆ ಈ ಕುದುರೆ ಮರಿನ ಲಾಯಿಕ್ ಮಾರಾಟ ಮಾಡಿ ಜಾತ್ರೆನೂ ನೋಡಿ ಬರಕಾತ್. ಅದರೆ ನಾವ್ಗೆ ಅದರ ಋಣ ಇಲ್ಲೆ. ಇತ್ತ ಕುದುರೆ ಮರಿನ ಕೊಂದ ಪಾಪ ನಮ್ಮ ಕಾಡದೆ ಇರಿಕಿಲೆ. ಹಾಂಗಾಗಿ ಇನ್ನ್ ಮುಂದೆ ನಾವು ನಮ್ಮದೇ ಯೋಚನೆ ಪ್ರಕಾರ ನಡ್ಕಂಕ್ ಹೊರತ್, ಯಾರ್‍ಯಾರ ಮಾತ್ ಕೇಳಿ ನಮ್ಮ ತೀರ್ಮಾನಗಳ ಬದಲಿಸಿಕೆ ಆಗದ್‌ಂತ ಹೇಳ್ತ್. ಅಪ್ಪಂಗೂ ಮಞ ನೂರಕ್ಕೆ ನೂರು ಸತ್ಯದ ಮಾತ್ ಹೇಳ್ತಾ ಉಟ್ಟುಂತ ನೆನ್ಸಿ. ಇಬ್ಬರೂ ಕುದುರೆ ಮರಿನ ಗುಂಡಿಗೆ ಹಾಕಿಕೆ ತಯಾರ್ ಮಾಡ್ದೊ.

****

# 19. ಹತ್ತ್ ಸುಳ್ಳ್



ಸಮಾಜದ ಒಳತಿಗಾಗಿ ಕೆಲವೊಮ್ಮೆ ಸುಳ್ಳ್ ಹೇಳಿರೂ ತೊಂದರೆ ಇಲ್ಲೆಂತ ನಾವ್ಗೆ ಸ್ವಾತಂತ್ರ ತಂದುಕೊಟ್ಟ ಮಹಾತ್ಮಾ ಗಾಂಧೀಜಿ ಒಂದು ಕಡೆ ಹೇಳಿರೆ; ಸಾವಿರ ಸುಳ್ಳು ಹೇಳಿಯಾದರೂ, ಮದುವೆ ಮಾಡೊಕುಂತ ನಮ್ಮ ಹಿರಿಯೋವು ಹೇಳ್ತಿದ್ದೊ. ಅಂದರೆ ಒಳ್ಳ ಕಾರ್ಯ ಅದರೆ, ಅದರ್‌ಂದ ಇನ್ನೊಬ್ಬಂಗೆ ತೊಂದರೆ ಅಗದಿದ್ದರೆ ನಾವು ಸುಳ್ಳು ಹೇಳಿರೂ ಅದ್ ಪಾಪ ಅಲ್ಲಂತ ನಮ್ಮ ಹಿರಿಯರ ತೀರ್ಮಾನ. ಇನ್ನೊಂದು ಕಡೆ ಹೇಳುವೆ ಒಂದು ಸುಳ್ಳು ನಮ್ಮ ಬಾಯಿಂದ ಬಾತ್‌ತಾದರೆ, ಅದರ ಸರಿ ಪಡಿಸಿಕೆ ಮತ್ತೆ ಹತ್ತ್ ಸುಳ್ಳನ ಹೇಳಕಾದೆ. ಅದರ್‌ಂದ ಸತ್ಯ ಮಾರ್ಗಲೇ ಹೋದ್ ಒಳ್ಳದ್. ಅದರ್‌ಂದ  ನಮ್ಮ ತಲೆ ಹೋದರೂ ಚಿಂತೆ ಇಲ್ಲೆಂತ ಕೆಲವು ನೇರ ಮಾರ್ಗಲಿ ನಡೆವ ಜನರ ತೀರ್ಮಾನ  ಹಾಂಗೆಂತ ನೂರಕ್ಕೆ ನೂರು ಸತ್ಯ ಹೇಳಂವ ಇದ್ದರೆ ಅದ್ ಸತ್ಯ ಹರಿಶ್ಚಂದ್ರಂತ ನಾವೆಲ್ಲ ಒಪ್ಪಿಕೊಂಡೊವೆ.  ಈ ತಲೆ ಹೋದರೂ ಚಿಂತೆ ಇಲ್ಲೆಂತ ಹೇಳ್ದಂವ ಅವನ ತಲೆ ಮುಟ್ಟಿ ಹೇಳಿಕೆ ಹೇಳಿರೆ, ಅಂದರೆ ನೀ ನಿನ್ನ ಹೆಣ್ಣ್‌ನೊಟ್ಟಿಗೆ ನೂರಕ್ಕೆ ನೂರು ಸತ್ಯನೇ ಹೇಳಿಯಾಳಂತ ಹೇಳ್‌ತೇಳಿರೆ ಎಷ್ಟ್ ಜನ ತಲೆ ಮುಟ್ಟನೋ, ಇಲ್ಲರೆ ದೇವರ ಮೇಲೆ ಆಣೆ ಹಾಕಿನೋ ಹೇಳಿಕೆ ಹೇಳಿರೆ ಹಃ ಹಃ ಹಃ ಅದೆಲ್ಲಾ ಬಾಯಿಲಿ ಹೇಳ್ದಾಂಗೆ ಅದೇನೋ ಅಣ್ಣಾಂತ ಮಾತ್‌ನ  ಹಾರ್‍ಸಿಕೆ ನೋಡುವೊ. ಇದೆಲ್ಲಾ ನಮ್ಮ ಸಮಾಜ ಅಲ್ಲನೋ?

ಅದರೆ ಸುಳ್ಳು ಹೇಳಿಯೇ ಜೀವನ, ಸತ್ಯಕ್ಕೆ ದಾರಿನೇ ಇಲ್ಲೆಂತ ಯೋಚನೆ ಮಾಡ್ದು ಕೂಡಾ ನೂರಕ್ಕೆ ನೂರು ಸುಳ್ಳು. ಈಗನ ಕಾಲಲಿ ಕೂಡಾ

ಸತ್ಯ – ಧರ್ಮಂತ ಹೇಳ್ದು, ನಡೀತಾ ಉಟ್ಟು, ಸತ್ಯಲೇ ಇದ್ದವಂಗೆ ಎನೂ ಗತಿ ಇಲ್ಲದಿದ್ದರೂ  ಈಗನ ಸಮಾಜಲೀ ಅಂವ ಬದ್ಕಿಕೆ ಸಾಧ್ಯ ಉಟ್ಟಂತ ನಾವು ತುಂಬಾ ಸರ್ತಿ ನೋಡುವೆ. ಯಾವುದೋ ಒಂದು ವಸ್ತುನ ಬಗ್ಗೆ ಅಗಲಿ, ಯಾರೊಬ್ಬ ವ್ಯಕ್ತಿನ ಬಗ್ಗೆ ಆಗಲಿ, ಹತ್ತ್ ಜನ ಎನಾರ್ ಹೇಳಿರೆ ಅದ್ ಸುಳ್ಳಾದರೂ ಸತ್ಯಾಂತ ನಾವು ನಂಬುವೆ.  ಹತ್ತ್ ಜನ ಸೇರಿ ಎಲ್ಲೋ ಕಾಡ್ ಗುಡ್ಡೇಲಿ ಒಂದು ಕಲ್ಲ್; ಅದ್ ದೆವ್ವದ ಕಲ್ಲ್‌ಂತ ಹೇಳಿ ಕೈ ಮುಗ್ದವೆ, ಅ ಕಲ್ಲ್‌ಗೂ ಸತ್ಯ ಸಂಕಲ್ಪ ಅದೆಂತ ನಾವು ನಂಬೋವು ಹತ್ತ್ ಇದ್ದಲ್ಲಿ ಮುತ್ತು ಉಟ್ಟುಂತ ಗಾದೆ ಹುಟ್ಟಿಕಾಂಕೆ ಇದೇ ಕಾರಣ ಆಗಿರ್ದು. ಆದರೆ ಅದೇ ಹತ್ತ್ ಜನ ಸೇರಿ ಒಬ್ಬನ ಮೋಸ ಮಾಡಿಕೆನೂ  ಅದೆಂತ ಈಗ ನಾ ಹೇಳುವ ಕಥೇಲಿ ನೀವು ತಿಳ್ಕಣಕು.

ಒಂದು ಊರ್‌ಲಿ ಒಬ್ಬ ಕುರಿ ಮೊರಿನ ಹೆಗ್‌ಲ್ ಮೇಲೆ ಇಸಿಕಂಡ್ ಅವನ ಮನೆ ಕಡೆ  ಹೊರ್ಟತ್‌ಗಡ. ಆ ಕುರಿ ಮೊರಿನ ಇಸಾಕ್ ಸಾಹೇಬ್ರ ಹಕ್ಕಲೆಂದ ಅರು ನೂರು ರೂಪಾಯಿ ಕೊಟ್ಟು ಮನೇಲಿ ಸಾಂಕೊಂಕುಂತ ಹೊತ್ತ್‌ಕೊಂಡ್ ಹೋದೆ. ಆ ದಿನ ಅ ಊರಿಗೆ  ಹತ್ತ್ ಜನ ಕಳ್ಳರ್ ಎಲ್ಲಿಂದೋಳೊ ಬಂದವೆ. ಅವ್ಕೆ ಅ ದಿನ  ಕದಿಯಕೆ ಎನೂ ಸಿಕ್ಕಿತ್ತಿಲೆ. ಇಂವ ಕುರಿ ಮೊರಿ ಹೊತ್ತ್‌ಕಂಡ್ ಬರಂವನ ದೂರಂದಳೇ ನೋಡಿ ಅವು  ಒಂದು ತೀರ್ಮಾನಕ್ಕೆ ಬಂದೋಗಡ.  ಇಂದ್ ಕಳ್ಳತನಕ್ಕೆ  ಬೋಣಿನೆ ಆತ್‌ಲೆ. ಈಗ ನಾವ್ಗೆ ಅ ಕುರಿ ಮೊರಿ ಸಿಕ್ಕಿರೂ ಸಾಕ್. ಅದರ ಯಾರಿಗಾದರೂ ಮಾರಿ ಎರಡ್ ಹೊತ್ತ್‌ನ  ಗಂಜಿಗೆ ದಾರಿ ಅದುಂತ  ತೀರ್ಮಾನ ಮಾಡ್ದೋ. ಹೇಂಗೆ ಕದಿಯೊದುಂತ ಉಪಾಯ ಹುಡ್ಕಿದೊ. ಅಂವಂಗೆ ಬೊಡ್ದ್ ಎಳ್ಕಂಬದು ಬೇಡ. ಮತ್ತೇ ಹೆಂಗೆ? ಅಷ್ಟೊತ್ತಿಗೆ ಒಬ್ಬ ಹೇಳ್ತ್. ನಾವು ಹತ್ತ್ ಜನ ಕೂಡಾ ಅಂವ  ಹೋವ ದಾರಿ ಉದ್ದಕ್ಕೆ ಅಲ್ಲಲ್ಲಿ ನಿಲ್ಲುಮೊ. ಹತ್ತ್ ಜನ ಸಹ ಬೇರೆ ಬೇರೆ ರೀತಿಲಿ ಅದರ ನಾಯಿಂತ ಅವನೊಟ್ಟಿಗೆ ಹೇಳೋಮೊ. ಅಗ  ಅಂವಂಗೆ ತಲೆ ಕೆಟ್ಟ್ ಹೋಗಿ ಅದರ ಹೆರ್ಕಿಟ್  ಹೋಕೆನೂ ಸಾಕ್‌ಂತ ಹೇಳ್ತ್. ಎಲ್ಲವುಕೆ ಅದೇ ಸರಿಂತ ಅನಿಸಿ ಬೇಗ ಬೇಗ ಒಬ್ಬೊಬ್ಬ ದೂರ ದೂರ ಒಡ್ದೊ.

ಇತ್ತ ಇಂವ ಕುರಿ ಮೊರಿನ ಬಾರಿ ಲಾಯ್ಕಿಲಿ ಹೆಗ್‌ಲ್ ಮೇಲೆ ಅತ್ತ – ಇತ್ತ ಕಾಲ್ ಹಾಕಿ, ಅದರ ಕೈಲಿ – ಕಾಲ್‌ಲಿನೂ ಹಿಡ್ಕಂಡ್, ನಡ್ಕಂಡ್ ಹೋಕೆ ಶುರು ಮಾಡ್ತ್. ಶುರುಗೆ ಒಬ್ಬ ದಾರಿಲಿ ಎದ್‌ರ್ ಸಿಕ್ಕಿ ಕೇಳ್ತ್. ಅಣ್ಣ

ನಮಸ್ಕಾರ, ನೀವು ದೂರ ಹೊರ್ಟದ್ ನಾಯಿನ ಹೆಗ್‌ಲ್ ಮೇಲೆ ಇಸಿಕಾಂಡ್‌ಂತ ಕೇಳ್ತ್. ಆಗ ಕುರಿನಂವ ಹೇಳ್ತ್ ನೀ ಯಾರಣ್ಣ ನಂಗೆ ಗೊತ್ತ್‌ಲೆ ನಿನ್ನ ಕಣ್ಣ್ ಸರಿ ಉಟ್ಟಾ ಹೇಳ್ ಇದ್ ನಾಯಿ ಅಲ್ಲ; ಕುರಿ ಮೊರಿಂತ ಹೇಳಿ ಸೀದಾ ಹೋತ್, ಹಣಿ ದೂರ ಹೋಕನ ಮತ್ತೊಬ್ಬ ಎದ್‌ರ್ ಸಿಕ್ಕಿ ಓಯ್ ನೀವು ಎಲ್ಲಿಗೆ ಹೊರ್ಟರಿ ನಾಯಿನ ಹೆಗ್‌ಲ್ ಮೇಲೆ ಇಸಿಕಾಂಡ್‌ಂತ ಕೇಳ್ತ್. ಇಂವ ತಿರ್ಗಿಸಿ, ಓಯ್ ಅಣ್ಣ ಇದ್ ನಾಯಿ ಅಲ್ಲ ಕುರಿ ಮೊರಿ, ನಾಯಿ ನೀನೇಂತ, ಬೊಯ್ದ್ ಸೀದಾ ಹೋತ್. ಹಾಂಗೆ ಮತ್ತೆ ಹಣಿ ದೂರ ಹೋಕನ ಮೂರನೇಂವ ಸಿಕ್ಕಿ ಕೇಳ್ತ್. ಓ ಅಣ್ಣರೇ, ನಮಸ್ಕಾರ ಇದ್ ಎಲ್ಲಿಗೆ ನಾಯಿನ ಹೊತ್ತ್‌ಕಂಡ್? ಅದ್ಕೆ ಉಷಾರಿಲ್ಲೇನಾ ಹೇಂಗೆ? ಇದ್ ಜಾತಿ ನಾಯಿನೇ ಆಗಿರೋಕಲ್ಲಂತ ಕೆಳ್ತ್. ಇವಂಗೆ ವಿಪರೀತ ಸಿಟ್ಟ್ ಬಾತ್. ನೀವೆಲ್ಲಾ ಯಾರ್, ದಾರಿ ಉದ್ದಕ್ಕೂ ಗುರ್ತ ಇಲ್ಲದೊವೆಲ್ಲಾ ಸಿಕ್ಕಿರೇ ಮತ್ತೆ ಒಂದೇ ಥರ ಹುಚ್ಚರಾಂಗೆ ಮಾತಾಡ್ರೆ. ಇದ್ ನಾಯಿ ಅಲ್ಲ ಕುರಿ ಮೊರಿಂತ ಹೇಳ್ತ್. ಆಗ ಅಂವ ಎಂತ ಕುರಿ ಮೊರಿನಾ ಹಃ ಹಃ ಹಃ ನಾಯಿನ ಯಾರಾರ್ ಕುರಿ ಮೊರಿಂತ ಹೇಳುವೆನಾಂತ ಕೇಳ್ತ್. ಆಗ ಇವಂಗೆ ಯಾಕೋ ಡೌಟ್ ಆಗಿ ಒಮ್ಮೆ ಹೆಗ್‌ಲ್ ಮೇಲೆಂದ ಕೆಳಗೆ ಇಳ್ಸಿ ನೋಡ್ತ್. ಕೆಬಿನೆಲ್ಲಾ ಹಿಡ್ದ್, ಮೋರೆನ ಪೂಜ್‌ಕನ ಮೆಃ ಮೆಃ ಮೆಃಂತ ಮರ್ಬ್ಟತ್. ಇಂವ ನೇಚಿ ಅದರ ಹೆಗ್‌ಲ್ ಮೇಲೆ ಹಾಕಾಂಡ್ ನೀವ್ಗೆಲ್ಲಾ ತಲೆ ಕೆಟ್ಟುಟುಂತ ಬೊಯ್ಕಂಡ್ ಮುಂದೆ ಹೋತ್.

ಮತ್ತೆ ಒಂದು ಗುಡ್ಡೆ ಹತ್ತಿ ಇಳೇಕಾಕನ ನಾಲ್ಕನೇಂವ ಸಿಕ್ಕಿ ಅಣ್ಣಾ ನಾಯಿನ ಎಲ್ಲಿಗಣ್ಣಾ ಹೊತ್ತ್‌ಕಂಡ್? ನಂಗೆ ಕೊಟ್ರೆನಾಂತ ಕೇಳ್ತ್. ಇಂವ ಸಿಟ್ಟ್‌ಲಿ ಅವನೊಟ್ಟಿಗೆ ಎನೂ ಮಾತಾಡದೆ ಮುಂದೆ ಹೋತ್. ಹಾಂಗೆ ಮುಂದೆ ಹೋಕನ 5ನೇಯಂವ, ಆರನೇಯಂವ, ಏಳನೇಯಂವ, ಎಂಟನೇಯಂವ ಕಡೆಗೆ ಒಂಭತ್ತನೇಯಂವ ಸಿಕ್ಕಿತ್. ಅಷ್ಟೊತ್ತಿಗೆ ಹಿಂಬೊತ್ ಆಕಾಂಡ್ ಬಾತ್. ಅಂವ ಅಣ್ಣಾ ನಮಸ್ಕಾರಣ್ಣಾ ನಿಮ್ಮ ನೋಡದೆ ಸುಮಾರ್ ದಿನ ಆತ್. ನೀವು ಈ ನಾಯಿಗೆ ದುಡ್ಡ್ ಕೊಟ್ಟಳರೀನಾ, ನಂಗೆ ಕೊಟ್ರೆನಾಂತ ಬಾರೀ ಗುರ್ತ ಇದ್ದವರಂಗೆ ಕೇಳ್ತ್. ಇವಂಗೆ ಅಷ್ಟೊತ್ತಿಗೆ ತಾಳ್ಮೆ ಕೆಟ್ಟ್ ಹೋಗಿತ್ತ್. ಅಲ್ಲದೆ ಅವಂಗೆ ಈಗ ಅವನ ಮೇಲೆನೇ ಡೌಟ್ ಆಕೆ ಶುರು ಆತ್. ದಾರಿಲೀ ಸಿಕ್ಕಿದ ಈ ಒಂಭತ್ತು ಜನನೂ ನಾಯಿ – ನಾಯಿಂತ ಹೇಳ್ತಾ

ಒಳಲ್ಲಾ. ಅಂದರೆ ಇದ್ ನನ್ನ ಕಣ್ಣಿಗೆ ಕುರಿನಾಂಗೆ ಕಾಂಬೊದಾಂತ ಯೋಚನೆ ಮಾಡ್ತಾ. ಇಲ್ಲೇ –ಇಲ್ಲೇ ನಾಯಿನ ಆ ಬ್ಯಾರಿ ನಂಗೆ ಮಾರಿಕಿಲೆಂತ ಮನ್ಸ್‌ಲೇ ನೆನ್ಸಿಕಾಂಡ್, ಇಲ್ಲೆಣ್ಣ ಈ ನಾಯಿ ನಂಗೆ ಬೇಕುಂತಳೇ ತಂದದ್. ನೀವ್ಗೆ ಕೊಡ್ದುಲೆಂತ, ಅವನೊಟ್ಟಿಗೆ ಅವನಾಂಗೆ ಹೇಳಿ ಮುಂದೆ ಹೋತ್. ಮತ್ತೆ ಹನಿಸ್ ದೂರ ಹೋಕನ ಹತ್ತನೇಯಂವ  ಸಿಕ್ಕಿ ಓ..... ಅಣ್ಣ ಬಾರೀ ದಿನಂದ ನಿಮ್ಮ  ಕಂಡತೇಲೇ. ಒಹೋ ಹೋ... ಹೋ... ಈ ನಾಯಿನ  ಎಲ್ಲಿಂದ ತಂದರೀ, ಪಾಪ ಹೆಗ್‌ಲ್ ಬೆವರಿ ಚೆಂಡಿ ಅಗಳೊರಿಂತ ಹೇಳ್ತ್. ನೋಡಿರೆ ಇವನ ಕೂಡಾ ಈ ಕುರಿ ಹೊತ್ತವಂಗೆ ಗುರ್ತ ಇಲ್ಲೆ. ಎನೇ ಅದರೂ ಇದ್ ನಂಗೆನೇ ಸರಿ ಇಲ್ಲದ್‌ಂತ ತೀರ್ಮಾನ ಮಾಡಿ; ಕುರಿ ಮೊರಿನ ಅಲ್ಲೇ ಹೊತ್ತ್ ಕುಕ್ಕಿ ಸೀದಾ ಅವನ ಮನೆ ಕಡೆ ಹೋತ್. ಆ ಹತ್ತ್ ಜನರ ಉಪಾಯ ಫಲಿಸಿತ್.

****

# 20. ಚಕ್ಕುಲಿ ಕಳ್ಳರು



ಒಂದು ಊರ್‌ಲಿ ಒಬ್ಬ ರಾಜ ಇತ್ತ್. ಅವಂಗೆ ಒಬ್ಬಳೇ ಮಗಳ್. ಅವಳ ಭಾರೀ ಪ್ರೀತಿಂದ ಸಾಂಕಿಯಣ್ ಇತ್ತ್. ಹಾಂಗೇನೇ ಆ ಊರ್‌ಲಿ ಪ್ರಜೆಗಳನೂ ಲಾಯಿಕ್‌ಲಿ ನೋಡಿಕ್‌ಂಡ್ ಆಡಳಿತ ಮಾಡಿಕಂಡ್ ಇತ್ತ್. ರಾಜ ತೇಳ್ದ ಮೇಲೆ ಅವಂಗೆ ನಾಲ್ಕಾರ್ ಮಂತ್ರಿಗ, ಸೇನೆ, ಸೇನಾ ನಾಯಕ್‌ರ್‌ಗ ಹಾಂಗೆ ಅಸ್ಥಾನ ಪಂಡಿತರ್, ಸೇವಕರ್, ಸೇವಕಿಗೆ, ಹಾಂಗೆ ಆನೆ, ಕುದುರೆ, ಅಸ್ಥಾನ ನರ್ತಕ, ನರ್ತಕಿಗ, ದೊಡ್ಡ ಅರಮನೆ ಇದೆಲ್ಲವೂ ನಮ್ಮ ಮನ್ಸಿಗೆ ಬಂದದೆ. ಅದೇ ರೀತಿ ಈ ರಾಜಂಗೂ ಎನೂ ಕಮ್ಮಿ ಇತ್ತ್‌ಲೆ. ಎಲ್ಲವೂ ಇತ್ತ್. ಆದರೆ ಅವಂಗೆ ಇದ್ ಎಲ್ಲದರ್‌ಂದ ದೊಡ್ಡ ಆಸ್ತಿ ತೇಳಿರೆ ಅವನ ಮಗಳು.

ರಾಜನ ಮಗಳಿಗೆ ಸಣ್ಣದರ್ಲ್ಲೇ ವಿದ್ಯೆ, ಬುದ್ದಿನೆಲ್ಲಾ ಸರಿಯಾಗಿ ಕಲ್ಸಿತ್. ಯುವ ರಾಣಿಗೆ ಬೇಕಾದ ಎಲ್ಲಾ ಶಿಕ್ಷಣನ ಕೊಟ್ಟತ್. ಅದರ್ಲ್ಲೊ ರಾಜಕುಮಾರರ ಹಾಂಗೆ ಕುದುರೆ ಸವಾರಿ, ಬಿಲ್ವಿದ್ದೆ, ಕತ್ತಿ ವರಸೇ ಹೀಂಗೆ ಎಲ್ಲದವರನೂ ಒಳ್ಳೆ ಗುರುಗಳ ಆಯ್ಕೆ ಮಾಡಿ ಕಲ್ಸಿತ್ ಆದರೆ ಅವನ ಅರಮನೆಲಿ ಕಲಿಯಕ್ಕೆ ಅಗದ ಕೆಲವೊಂದು ವಿದ್ಯೆನ ಬೇರೆ ಊರ್‌ಲಿ ಕಲಿಯಕ್ಕಾದ ಅನಿವಾರ್ಯತೆ ಒಂದು ದಿನ ಒದಗಿ ಬಾತ್. ರಾಜಕುಮಾರಿನ ಹೊರಗೆ ಕಳ್ಸಿಕೆ ರಾಜ ಅಪ್ಪಂಗೆ ಮನ್ಸ್ ಇಲ್ಲೆ. ಅದರೆ ಕಳ್ಸದೇ ಇದ್ದರೆ ಅವಳ ಭವಿಷ್ಯ ಹಾಳಾದೆಂತ ಯೋಚನೆ ಮಾಡಿ, ಮನ್ಸಿಲ್ಲದ ಮನ್ಸಂದ ದೂರದ ಇನ್ನೊಂದು ರಾಜ ಪ್ರಾಂತಕ್ಕೆ ದೊಡ್ಡ ವಿದ್ಯಾಭ್ಯಾಸಕ್ಕಾಗಿ ಕಳ್ಸಿತ್.

ಹೀಂಗೆ ಕಳ್ಸಿದ ಮೇಲೆ ರಾಜಂಗೆ ಬಾರೀ ಬೇಜಾರ್ ಆತ್. ರಾಜ ಕುಮಾರಿ ಅದರೂ ಅವಳಿಗೆ ಸಾಮಾನ್ಯ ತಿಂಡಿಗ ತೇಳಿರೆ ಬಾರೀ ಪ್ರೀತಿ. ಅವಳು ಅರಮನೆಲಿ ಇರಿಕಾಕನ ಅವಳಿಗೆ ಏನೂ ಕಮ್ಮಿ ಅಗದಾಂಗೆ ನೋಡಿಕಾಂತಿತ್.

ಅರಮನೇಲಿ ಅವಳೊಟ್ಟಿಗೆ ಅವಳ ಸಕಿಯರ್ ಮತ್ತೆ ತುಂಬಾ ಜನ ಸೇವಕಿ ಎಲ್ಲ ಇರ್ತಿದ್ದೊ. ಅದರೆ ಹೊರಗಡೆ ಹೋದ ಮೇಲೆ ಅ ರೀತಿ ಇರಿಕಾದುಲೆಂತ ರಾಜಂಗೆ ತುಂಬಾ ಬೇಜಾರಾಗ್‌ತ್ತಿತ್. ಅವಳ್ ಅಪ್ಪನೊಟ್ಟಿಗೆ ಕಳ್ದ ದಿನಗಳೆಲ್ಲ ನೆಂಪು ಮಾಡಿಕ್‌ಂಡ್ ರಾಜ ಒಮ್ಮೊಮ್ಮೆ ಅವನಿಷ್ಟಕ್ಕೆ ಕಣ್ಣೀರ್ ಹಾಕ್‌ತಿತ್.

ಒಮ್ಮೆ ಹೀಂಗೆ ರಾಜ ವಿಶ್ರಾಂತಿಲಿ ಇರಿಕನ ನನ್ನ ಮಗಳಿಗೆ ಚಕ್ಕುಲಿ ತೇಳಿರೆ ಬಾರಿ ಇಷ್ಟ. ನಾಳೆ ಅವಳಿಗೆ ನೂರು ಅಕ್ಕಿ ಚಕ್ಕುಲಿ ಮಾಡಿ ಸೇವಕನೊಟ್ಟಿಗೆ ಕಳ್ನೊಕುಂತ ತೀರ್ಮಾನ ಮಾಡಿ ಬೊಳ್ಪಿಗೆ ಬೇಗ ಕೆಲ್ಸದೊವುಕೆ ಅರ್ಡರ್ ಮಾಡ್ತ್. ಹಾಂಗೆ ಮಧ್ಯಾಹ್ನನ ಹೊತ್ತಿಗೆ ರುಚಿ, ರುಚಿಯಾದ ಚಕ್ಕುಲಿ ತಯಾರ್ ಮಾಡಿ, ರಾಜನ ನಂಬಿಕಸ್ಥ ಸೇವಕನ ಕರ್ದ್; ಈ ಚಕ್ಕುಲಿನ ನನ್ನ ಮಗಳಿಗೆ ತಲುಪುಸೊಕುಂತ ಹೇಳ್ತ್. ಆ ಸೇವಕ ಬಾರೀ ಲಾಯಿಕ್‌ಲಿ ಒಪ್ಪಿಕ್‌ಂಡ್ ಆ ಚಕ್ಕುಲಿ ಕಟ್ಟ್‌ನ ತಕ್ಕ್‌ಂಡ್ ಹೋತ್. ಆಗ ಈಗನಾಂಗೆ ವಾಹನದ ವ್ಯವಸ್ಥೆ ಇಲ್ಲದರ್‌ಂದ ಕುದುರೆ ಮೇಲೆ ಹೋತ್. ಕುದುರೆಲಿ ಹೋದರೂ ಎರಡು ದಿನದ ದಾರಿ ದೂರ ಇತ್ತ್. ಇವಂಗೆ ದಾರಿ ಖರ್ಚಿಗೆಂತ ಬೇಕಾದ ತಿಂಡಿ – ತೀರ್ಥಗಳ ಕಟ್ಟಿಕಂಡ್ ಹೋತ್. ದಾರೀಲಿ ಹೊಟ್ಟೆ ಇಸಿಕನ ತಿಂಬೋದು, ಕುಡಿಯೋದು ಹನಿಸ್ ಹೊತ್ತ್ ಮರದ ಬುಡಗಲ್ಲಿ ಬೊಚ್ಚಲ್ ತಕ್ಕಂಡ್ ಮುಂದೆ ಹೋತ್, ಹೀಂಗೆ ಹೋಗಿ ಚಕ್ಕುಲಿನ ರಾಜನ ಪ್ರೀತಿನ ಮಗಳಿಗೆ ಕೊಟ್ಟ್ ಬಾತ್.

ಚಕ್ಕುಲಿ ಕೊಟ್ಟ್ ಬಂದ ಮೇಲೆ ರಾಜ ಮಗಳಿಗೆ ಪತ್ರ ಬರ್ತ್. ಮಗಳೇ.... ನಿಂಗೆ ಚಕ್ಕುಲಿ ತೇಳಿರೆ ಬಾರೀ ಇಷ್ಟ. ಅದ್ಕೆ ನಾನೇ ಹೇಳಿ ಪ್ರೀತಿಂದ ನೂರು ಚಕ್ಕುಲಿ ಮಾಡಿ ಸೇವಕನೊಟ್ಟಿಗೆ ಕಳ್ಸಿಯೊಳೆ ಸಿಕ್ಕಿತ್ತಲ್ಲಾ? ಅದ್ ಮುಗೆವ ಹೊತ್ತಿಗೆ ಇನ್ನೊಮ್ಮೆ ಮಾಡಿ ಕಳ್ಸನೆ. ನಿನ್ನ ತುಂಬಾ ನೆಂಪಾದೆ. ಬೇಗ ವಿದ್ಯೆ – ಬುದ್ಧಿ ಕಲ್ತ್ ಅರಮನೆಗೆ ಬಾ ಅಂತೆಲ್ಲಾ ಕಾಗದ ಬರ್ತ್. ಮಗಳಿಗೆ ಆ ಕಾಗದ ಸಿಕ್ಕಿ ಓದಿತ್ತ್ ಅದರೆ ಅಪ್ಪ ಹೇಳ್ದಾಂಗೆ ಅದರ್ಲಿ 100 ಚಕ್ಕುಲಿ ಇತ್ತ್‌ಲೆ. ಬದಲಾಗಿ 80 ಚಕ್ಕುಲಿ ಮಾತ್ರ ಇತ್ತ್. ಇನ್ನ್ 20 ಚಕ್ಕುಲಿ ಎನಾತ್‌ಂತ ಯೋಚನೆ ಮಾಡಿ ಅಪ್ಪಂಗೆ ರಾಜಕುಮಾರಿ ಪತ್ರ ಬರ್ತ್. ಅಪ್ಪ ಚಕ್ಕುಲಿ ಬಾರೀ ಲಾಯಿಕ್ ಇತ್ತ್. ನಾ ಕುಷಿಲೀ ನಿಮ್ಮ ನೆಂಪು ಮಾಡಿಕಾಂಡ್ ತಿಂದೆ. ಹಾಂಗೆ ಹನಿಸ್ ನನ್ನ ದೋಸ್ತಿಗಳಿಗೂ ಕೊಟ್ಟೆ. ಅದರೆ ಅದರ್ಲಿ ನೀವು ಹೇಳ್ದಾಂಗೆ 100 ಚಕ್ಕುಲಿ ಇತ್ತ್‌ಲೆ 80 ಮಾತ್ರ ಇತ್ತ್‌ಂತ ಕಾಗದಲಿ ಹಾಕಿತ್. ರಾಜಂಗೆ ಯಾಕೋ ಡೌಟ್ ಅತ್ ಎಲ್ಲಾ 100 ಚಕ್ಕುಲಿ ಉಟ್ಟುಂತ ಎರಡೆರಡ್ ಸರ್ತಿ ಕೆಲ್ಸದೋವು ಲೆಕ್ಕ ಹಾಕಿದ್‌ಂತ ಹೇಳ್ದ ಮೇಲೆ ಹೇಂಗೆ ಕಮ್ಮಿ ಆತ್‌ಂತ ಯೋಚನೆ ಮಾಡಿ, ಎಲ್ಲಿಯಾದರೂ, ಈ ಸೇವಕ ಅದರ್‌ಂದ 20 ಚಕ್ಕುಲಿ ಕದ್ದತಾ? ಛೆ, ಅಂವ ಹಾಂಗೆ ಮಾಡಿಕಿಲೆ. ಎಷ್ಟೊ ವರ್ಷಂದ ನನ್ನ ನಂಬಿಕಸ್ಥ ಸೇವಕಂತ

ತೀರ್ಮಾನ ಮಾಡಿಕಾಂತ್. ಅದರೂ ಒಮ್ಮೆಗೆ ನಾ ಅವನ ಕಳ್ಳ ಮಾಡ್ದು ಸರಿ ಅಲ್ಲಂತಾ ಇನ್ನೊಮ್ಮೆ ನೋಡೊಮೊಂತ, ಇನ್ನೊಂದು ಸರ್ತಿ 100 ಚಕ್ಕುಲಿ ಮಾಡಿ ಅವನೊಟ್ಟಿಗೆ ಮೊದಲಿನಾಂಗೆ ಕಳ್ಸಿತ್. 2ನೇ ಸರ್ತಿ ಕೂಡಾ ಅಂವ ಕುದುರೆ ಮೇಲೆ ಹೋತ್. 2 ದಿನ ಕಳ್ದ್. ರಾಜಕುಮಾರಿಗೆ ಚಕ್ಕುಲಿ ತಲ್ಪಿಸಿ ಬಾತ್. ಆ ಸರ್ತಿ ಕೂಡಾ ರಾಜ ಮಗಳಿಗೆ ಕಾಗದ ಬರ್ತ್. ಈ ಸರ್ತಿ ನನ್ನ ಎದುರೇ 100 ಚಕ್ಕುಲಿ ಲೆಕ್ಕ ಮಾಡಿ ಕಳ್ಸಿದ್ 100 ಸರಿಯಾಗಿ ಇರ್ದುಂತ ಕಾಗದ ಬರ್ತ್ ಆದರೆ ಈ ಸರ್ತಿನೂ ಅದರ್ಲಿ 100ರ ಬದಲ್ 80 ತೇ ಚಕ್ಕುಲಿ ಇದ್ದದರ ಮಗಳ್ ಕಾಗದ ಬರ್ತ್.

ರಾಜಂಗೆ ಈ ಸರ್ತಿ ಖಾತ್ರಿ ಆತ್. ಇದ್ ಸೇವಕನ ಕೆಲ್ಸಂತೇಳಿ ಅವರ ಕರ್ದ್ ಜೋರ್ ಮಾಡ್ತ್. ನೀ ಮಗಳಿಗೆ ಎರಡ್ ಸರ್ತಿ ಕೂಡಾ 100–100 ಚಕ್ಕುಲಿ ಕಳ್ಸಿದರ್ಲಿ 80 ರ ಹಾಂಗೆ ಕೊಟ್ಟದ್. ಇನ್ನ್ 20 ಚಕ್ಕುಲಿ ಎನ್ ಮಾಡ್ದಾಂತ ಕೇಳ್ತ್. ಅಗ ಸೇವಕ....... ದನಿ ನಾ ಇಲ್ಲಿಂದ ಕಟ್ಟಿಕೊಂಡ್ ಹೋದ ಬುತ್ತಿ ಎರಡ್ ದಿನಕ್ಕೆ ಸಾಕಾಗದೇ ಇರಿಕನ ಹೊಟ್ಟೆ ಇಸಿ ಆ ಚಕ್ಕುಲಿನ 20ರ ತಿಂದಳೆಂತ ಜೋರು ಮಾಡ್ದ ಮೇಲೆ ಒಪ್ಪಿಕಾಂತ್. ಅಂದರೆ ಎರಡನೇ ಸರ್ತಿ ನೀ ಬೇಕಾದಷ್ಟ್ ಬುತ್ತಿ ತಕ್ಕಂಡ್ ಹೋಕಿತ್ತ್ ಯಾಕೆ ಎರಡನೇ ಸರ್ತಿನೂ ಹಾಂಗೆ ಮಾಡ್ದಾಂತ ಹೇಳ್ಕನ.. ದನಿ.. ನಾ ಒಮ್ಮೆ ಆ ಚಕ್ಕುಲಿ ತಿಂದ್ ನೋಡ್ದ ಮೇಲೆ; ಅಂತ ಚಕ್ಕುಲಿ ಹುಟ್ಟಿದ ಮೇಲೆ ತೀಂತ್‌ಲೇ. ಅಷ್ಟ್ ರುಚಿ ಇತ್ತ್. ಹಾಂಗಾಗಿ ಎರಡನೇ ಸರ್ತಿನೂ ಮನ್ಸ್ ತಡಿಯದೇ ಅದರ ಪರಿಮಳಕ್ಕೆ ಬಾಯಿಲಿ ನೀರ್ ಬಂದ್ ಬಿಚ್ಚಿ ತಿಂದೆಂತ ಒಪ್ಪಿಕಾಂತ್, ಅದರೊಟ್ಟಿಗೆ ನನ್ನದ್ ಸರ್ವ ತಪ್ಪಿತ್‌ಂತ ಕಾಲ್‌ಗೆ ಅಡ್ಡ ಬೀತ್. ರಾಜಂಗೆ ಅವನ ಮೇಲೆ ಕರುಣೆ ಬಂದ್ ಅತ್ ಇದರ ಯಾರೊಟ್ಟಿಗೂ ಹೇಳ್ಬಡಂತ ಹೇಳಿ ಕಳ್ಸಿತ್.

ಮೂರನೇ ಸರ್ತಿ ರಾಜ ಚಕ್ಕುಲಿ ಮಾಡಿ ಇನ್ನೊಬ್ಬ ಸೇವಕನ ಕರ್ದ್ ಈ ಚಕ್ಕುಲಿನ ನನ್ನ ಮಗಳಿಗೆ ಕೊಟ್ಟ್ ಬರೋಕುಂತ ಕಳ್ಸಿತ್. ಅವನೂ 2 ದಿನಕ್ಕೆ ಬೇಕಾದ ಬುತ್ತಿನ, ನೀರ್‌ನ ಎಲ್ಲಾ ಕಟ್ಟಿಕಂಡ್ ಕುದುರೆ ಮೇಲೆ ಹೋತ್. ಈ ಶುರು ಹೋದವನ ಕಥೆ ಅವಂಗೆ ಗೊತ್ತಿಲ್ಲೆ. ಈ ವಿಷಯ ಎಲ್ಲೂ ಪ್ರಚಾರ ಅಕೆ ರಾಜನೂ, ಸೇವಕನೂ, ಬುಟ್ಟತ್ತಿಲೆ. ಈ ಸೇವಕನೂ ಹೋಗಿ ರಾಜಕುಮಾರಿಗೆ ಚಕ್ಕುಲಿ ಕೊಟ್ಟ್ ಬಾತ್. ಬಂದ ಮೇಲೆ ರಾಜ ಮಗಳಿಗೆ ಪತ್ರ ಬರ್ತ್. ಈ ಸರ್ತಿ ಮತ್ತೆ 100 ಚಕ್ಕುಲಿ, ಆರ್ ಸುತ್ತಲಿ ಮಾಡಿ ಕಳ್ಸಿಯಳೆ ಮಗಳೆ. ಅಂದರೆ ಒಂದು ಚಕ್ಕುಲಿಗೆ ಆರ್ ಸುತ್ತ್ ಬರುವಾಂಗೆ ಚಕ್ಕುಲಿ ಹೋಯ್ದು ಕಟ್ಟ್ ಮಾಡಿ ಕಳ್ಸಿದ್. ಸರಿ ನೋಡಿ ಲೆಕ್ಕಾ ಮಾಡಿ ನಂಗೆ ಪತ್ರ ಬರೆಯೋಕು. ಮತ್ತೆ ಈ ಸರ್ತಿನ ಚಕ್ಕುಲಿನ ರುಚಿನ ಇನ್ನಷ್ಟು ಲಾಯಿಕ್

ಆಗುವಾಂಗೆ ಮಾಡಿಕೆ ಹೇಳಿಯಳೆಂತ ರಾಜ ಕಾಗದ ಬರ್ತ್. ಕಾಗದ ಓದಿ ಮಗಳ್ ಚಕ್ಕುಲಿನ ಬಿಚ್ಚಿ ನೋಡ್ತ್. ನೋಡಿರೆ ಚಕ್ಕುಲಿ ಲೆಕ್ಕಕ್ಕೆ ನೂರು ಉಟ್ಟು. ಅದರೆ ಚಕ್ಕುಲಿಲಿ 5 ಸುತ್ತು ಮಾತ್ರ ಉಟ್ಟು. ಎಲ್ಲಾ ಚಕ್ಕುಲಿಂದ ಒಂದೊಂದು ಸುತ್ತ್ ಮುರ್ದು ತೆಗ್ದಾಂಗೆ ಇವಳಿಗೆ ಕಂಡದೆ. ಅದರ ಹಾಂಗೆ ಅಪ್ಪ ರಾಜಂಗೆ ಕಾಗದ ಬರ್ದದೆ.

ರಾಜಂಗೆ ಮಗಳ ಕಾಗದ ಓದಿ ಆಶ್ಚರ್ಯ ಆದೆ. ಎಲಾ ಇವನೇ... ಇಂವ ಎಲ್ಲದರ್‌ಂದ ಚಕ್ಕುಲಿ ಒಂದೊಂದು ಸುತ್ತು ಮುರ್ದ್ ತೀಂತಾ! ಹೇಂಗೇಂತ ಅವನ ಕರ್ದ್ ಕೇಳ್ತ್. ಆಗ ಅಂವ ಇಲ್ಲೆ ನಾ ಎನೂ ಮಾಡ್ತ್‌ಲೆಂತ ಒಪ್ಪಿಕಾಂತೇಲೆ. ಕಡೆಗೆ ನಿನ್ನ ಸತ್ಯ ಹೇಳದಿದ್ದರೆ ಕೊಂದನೆಂತ ಒರೆಂದ ಬಾಳ್ ಕತ್ತಿ ತೆಗ್ತ್. ಆಗ ರಾಜನ ಕಾಲ್‌ಗೆ ದಡ್ಕಂತ ಬಿದ್ದ್ ದೇವರೇ ನಾ. ಕದ್ದದ್ ಹೌದು. ಅದ್ ನೀವ್ಗೆ ಗೊತ್ತಾಕೆ ಬೊತ್ತ್‌ಂತ ಎಲ್ಲಾ ಚಕ್ಕುಲಿಂದ ಒಂದೊಂದು ಸುತ್ತ ತಿಂದೊಳೆಂತ ಒಪ್ಪಿಕಂಡತ್. ರಾಜ ಅವನನೂ ಸುಡಲಿಂತ ಹೋಗುಂತ ಬುಟ್ಟಾತ್. ಆದರೆ ರಾಜ ಮಾತ್ರ ಯೋಚನೆ ಮಾಡ್ತ್. ಹಿಂಗಾದರೆ ಹೇಂಗೆ ನಂಬುದು? ಅಂದ್ ಅಂವ 20 ಚಕ್ಕುಲಿನೇ ಲೆಕ್ಕಕೇ ಕಮ್ಮಿ ಮಾಡಿ ತೀಂತ್. ಅದರೆ ಇಂವ ಕಳ್ಳರ್ಲಿ ಮಹಾಕಳ್ಳ. ತಿಂದರೂ, ಗೊತ್ತಾಕೆ ಬೊತ್ತ್‌ಂತ ಸುತ್ತಂದ ತಿಂದ್ ನನ್ನ ಮಗಳಿಗೆ ಕೊಟ್ಟತ್. ಇಂವಂದ; ಅವನ ಎಷ್ಟಕ್ಕೂ ನಂಬಕ್. ಅಂವ ಪ್ರಮಾಣಿಕವಾಗಿ ಒಪ್ಪಿಕಾಂತ್ ಆದರೆ ಇಂವ ಶುರುಗೆ ಒಪ್ಪಿಕಾಂತಿಲೆ. ಅದಾರ್‌ಂದ ನಾ ಮತ್ತೆ ಅವನೊಟ್ಟಿಗೆನೇ ಇನ್ನ್ ಹೇಳ್ದ್ ಒಳ್ಳದ್. ಒಮ್ಮೆ ತಪ್ಪು ಮಾಡಿರೆ ಇನ್ನೊಮ್ಮೆ ಅಂವ ಮಾಡಿಕಿಲೆಂತ ನಂಬಿನೆ. ಅದರೆ ಇಂವ ನನ್ನ ವಿಶ್ವಾಸ ಕೆಲಸಕ್ಕೆ ಅರ್ಹ ಅಲ್ಲಂತ ಅವನ ಬೇರೆ ಕೆಲ್ಸಕ್ಕೆ ಕಳ್ಸಿತ್. ಅದರೊಟ್ಟಿಗೆ ಯೋಚನೆ ಮಾಡ್ತ್. ಇಂದ್ ಚಕ್ಕುಲಿ ಕದ್ದಂವ ನಾಳೆ ಇನ್ನ್ ಏನೂ ದೊಡ್ಡದ್ ಕದ್ದರೆಂತ ಒಂದು ಒಳ್ಳ ನಿರ್ಧಾರಕ್ಕೆ ಬಾತ್.

****

# 21. ಪತಿವೃತೆ



ಭಾರತೀಯ ಸಂಸ್ಕೃತಿಲಿ ಮಾತ್ರ ಮೊದ್ವೆ ಆದ ಮೇಲೆ ಗಂಡ–ಹೆಣ್ಣ್ ಒಟ್ಟಿಗೆ ಸಾಯುವವರೆಗೆ ಬದುಕಿ ಬಾಳುವೆ. ಆದರೆ ವಿದೇಶ ಸಂಸ್ಕೃತಿಲಿ ಹೀಂಗೆ ಇಲ್ಲೆ. ಆದ್ದರಿಂದ ಭಾರತೀಯರು, ಅದೂ ಹಿಂದೂಗ ಬಾರೀ ಕ್ರಮಲಿ, ಶಾಸ್ತ್ರ ಬದ್ಧವಾಗಿ ದೇವಾನುದೇವತೆಗಳ ಹೆಸರ್‌ಲಿ, ಹೆಣ್ಣ್‌ನ ಅಯ್ಯೆ–ಅಪ್ಪ ಒಂದು ಗಂಡ್‌ಗೆ ಮಗಳ ಧಾರೆ ಎರ್‌ದ್ ಕೊಡುವೊ. ಆ ಸಂದರ್ಭಲಿ ಅಯ್ಯೆ–ಅಪ್ಪನೊಟ್ಟಿಗೆ ತುಂಬಾ ಜನ ಬಂಧುಗ, ಒಡ ಹುಟ್ಟಿದೊವು, ನೆಂಟ್ರ್ ನಾಡ್‌ಗ, ಕುಟುಂಬದೊವು ಹೀಂಗೆ ತುಂಬಾ ಜನ ಸಾಕ್ಷಿ ಆದವೆ. ಒಂದು ಹೆಣ್ಣ್ ತನ್ನ ತವರು ಮನೇಲಿ ಹುಟ್ಟಿ, ಬಾಲ್ಯನೆಲ್ಲ ಅಲ್ಲೆ ಕಳ್ದ್ , ಅಯ್ಯೆ–ಅಪ್ಪನೊಟ್ಟಿಗೆ, ತನ್ನ ಅಣ್ಣ ತಮ್ಮಂದರೊಟ್ಟಿಗೆ ಆಟ–ಪಾಠಗಳ ಮಾಡಿಕಂಡ್; ಬೊದ್ಕಿ ಕಡೇಗೆ ಅವುಳಿಗೆ ಪ್ರಾಯಕ್ಕೆ ಬಾಕನ ಯಾರಿಗೋ ಗೊತ್ತಿಲ್ಲದವನೊಟ್ಟಿಗೆ ಬಾಳುವೆ ಮಾಡಿಕೆ ಮೊದ್ವೆ ಮಾಡಿಕೊಟ್ಟವೆ. ಅಲ್ಲಿ ವರೆಗೆ ನನ್ನ ಮನೆ, ನನ್ನ ಆಸ್ತಿ–ಬೊದ್ಕ್, ಅಯ್ಯೆ–ಅಪ್ಪ, ಒಡ ಹುಟ್ಟಿದವರೊಟ್ಟಿಗಿದ್ದ ಸಂಬಂಧ. ಯಾರೋ ಒಬ್ಬ ಕುತ್ತಿಗೆಗೆ ತಾಳಿ ಕಟ್ಟಿದ ಕೂಡ್ಲೆ ಅವನೊಟ್ಟಿಗೆ ಇದರೆಲ್ಲ ಮರ್ತ್ ಹೋಕಾದೆ. ಅದ್ ಯಾರೋದೋ ಮನೆನ, ಯಾರದೋ ಆಸ್ತಿ ಬದ್ಕ್‌ನ ನನ್ನದ್‌ಂತ ಕರೆಯಕಾದೆ. ಕೊಟ್ಟ ಹೆಣ್ಣ್ ಕುಲಂದ ಹೊರಗೆಂತ ಆ ಸಂದರ್ಭಲಿ ನಿರ್ಧಾರ ಆದೆ. ಎಲ್ಲಿ ವರೇಗೆಂತ ಹೇಳಿರೆ ನಾ ಹುಟ್ಟಿದ ಮನೇಲಿ ಯಾರು ಸತ್ತರೂ, ಹುಟ್ಟಿರೂ ಈ ಹೆಣ್ಣಿಗೆ ಸೂತಕ ಪಾತಕ ಕೂಡ ಇಲ್ಲೆ. ಅಬ್ಬಾ ಎಂತ ಕಠಿಣ ನಿರ್ಧಾರ. ಇದರೆಲ್ಲ ಸಹಿಸಿಕಂಡ್, ತಾಳ್ಮೆಲಿ ಸ್ವೀಕಾರ ಮಾಡುವ ಹೆಣ್ಣ್ ಅದೆಂತ ಸಹನಾಮೂರ್ತಿ. ಹಾಂಗಾಗಿಯೇ ಹೆಣ್ಣ್‌ನ ಈ ಭೂಮಿ ತಾಯಿಗೆ ಹೋಲಿಸುದಂತು ಸರಿಯಾಗಿಯೇ ಉಟ್ಟುಂತ ಆದೆ.

ಒಂದು ಹೆಣ್ಣ್ ಒಬ್ಬ ಪುರುಷನ ಸ್ವೀಕಾರ ಮಾಡ್ದ ಮೇಲೆ ಎಲ್ಲಾ ಸುಖ–ಕಷ್ಟಗಳ ಸರಿಯಾಗಿ ಹಂಚಿಕಾಂಕುತ, ನಮ್ಮ ಹಿರಿಯೋವು ಹೇಳಿ ಕೊಟ್ಟೊಳೊ. ಪತಿಯೇ ದೇವರು, ಪತಿಯೇ ಪರದೈವ, ಪತಿಯೇ ಸರ್ವಸ್ವಂತ ಹೆಣ್ಣಿಗೆ ಮನದಟ್ಟ್ ಮಾಡ್ಯೋಳೊ. ಹಾಂಗೆಂತ ಗಂಡ ಆದಂವ ಎಂತ ಕಷ್ಟ ಕೊಟ್ಟರೂ, ಬೊಡ್ದರೂ, ಹೊಡ್ದರೂ ತನ್ನ ತವರು ಮನೆಗೆ ಹೇಳದೆ, ತನ್ನ ಗಂಡನೊಟ್ಟಿಗೆ ಜೀವನ ಮಾಡ್ದೆ. ಈ ಹೆಣ್ಣ್ ಕೆಲವು ಸರ್ತಿ ತನ್ನ ಜೀವನನ್ನೇ ತೆಗ್ದರೂ ಗಂಡನ ಬುಟ್ಟ್; ತನ್ನ ತವರಿಗೆ ಹೆಣ್ಣ್ ಹೋಗದೆ ಕುದ್ದದೆ. ಆದರೆ ಇತ್ತೀಚಿನ ದಿನಗಳ್ಳಿ ಇಂತ ಎಲ್ಲಾ ಕ್ರಮನ ಈಗನ ಹೆಣ್ಣ್ ಮಕ್ಕ ಮಾಡ್ದುಲೆಂತ ಹೇಳಿಕೆ ಇಲ್ಲೊಂದು ಕಥೆನ ಹೇಳಿನೆ. ಇದ್ಕೆ ಕಾರಣ, ನಾವು ನಿತ್ಯವೂ ನೋಡುವ ಪಿಚ್ಚರ್‌ಗ, ಇತ್ತೀಚೆಗೆ ನಮ್ಮನ್ನೆಲ್ಲ ಆವರಿಸಿದ ಈ ಮೊಬೈಲ್‌ಗ ನಮ್ಮ ದೇಶದ ಪವಿತ್ರವಾದ ಸಂಸ್ಕೃತಿ ಪರಂಪರೆಗಳ ಸರ್ವನಾಶ ಮಾಡ್ತ ಉಟ್ಟು.

ಒಂದು ಊರ್‌ಲಿ ಒಬ್ಬ ಬಾರೀ ಒಳ್ಳೆ ಮೊನ್ಸ ಇದ್ದದೆ. ಪ್ರಾಯ ಬಾಕನ ಅವನ ಅಯ್ಯೆ ಅಪ್ಪ ಅವಂಗೆ ಗುರು–ಹಿರಿಯರ ಸಮ್ಮುಖಲಿ ಮೊದ್ವೆ ಮಾಡಿಕೊಟ್ಟವೆ. ಈ ಮೊನ್ಸನೊಟ್ಟಿಗೆ ಆ ಊರುನ ಜನಗಳಿಗೆ ಬಾರೀ ಪ್ರೀತಿ, ವಿಶ್ವಾಸ. ಅವನೂ ಕೂಡಾ ಅಷ್ಟೆ. ಊರ್‌ನವರೊಟ್ಟಿಗೆ ಬಾರೀ ಪ್ರೀತಿಲಿ ಬದುಕುತ್ತಾ ಇತ್ತ್. ಊರ್‌ಲಿ ಯಾರಿಗೇ ಎಂತ ಕಷ್ಟ ಬರ್‍ಲಿ ಈ ಮೊನ್ಸ ಅಲ್ಲಿ ಹಾಜರ್. ಹಾಂಗೆಂತ ಯಾರೊಟ್ಟಿಗೆ ಜಗಳ ಮಾಡ್ದಗಲಿ, ಉಪದ್ರ ಮಾಡ್ದಾಗಲಿ ಇವನೊಟ್ಟಿಗೆ ಇತ್ತ್‌ಲೆ. ಈ ಮೊನ್ಸ ಮೊದ್ವೆ ಆದ ಗೂಡೆ, ನೋಡಿಕೆ ಬಾರೀ ಪೊರ್ಲು ಉಟ್ಟು. ಮೊದ್ವೆ ಆದ ಶುರುಲಿ ಎಲ್ಲವೂ ಹೇಳಿಕಾಂತಿದ್ದೊ. ಏನೇ ಆಗಲಿ ನಮ್ಮಣ್ಣಂಗೆ ಸರಿಯಾದ ಗೂಡೆ. ಒಳ್ಳೆ ಮೈಕಟ್ಟ್, ಕಂಡವರೊಟ್ಟಿಗೆ ಪ್ರೀತಿಂದ ಮಾತಾಡ್ಸಿದೆ. ಹಾಂಗೆ – ಹೀಗೆಂತ ಮಾತಾಡಿಕಾಂತಿದ್ದೊ. ಕೆಲವು ವರ್ಷ ಕಳ್ದ ಮೇಲೆ ಆ ಹೆಂಗ್‌ಸ್‌ನ ಗುಣ ಸರಿ ಇಲ್ಲೆಂತ ಒಬ್ಬೊಂಗೇ ಅರ್ಥ ಆಕೆ ಶುರು ಆತ್. ಒಬ್ಬ ಲಾಯ್ಕ್‌ನಂವ ಸಿಕ್ಕಿರೆ ಈ ಹೆಂಗಸ್‌ಗೆ ಅವನೊಟ್ಟಿಗೆ ಎಲ್ಲವನ್ನು ಕೊಟ್ಟು ತಕ್ಕಂಬ ಆಸೆ. ಇದ್ ಒಬ್ಬೊಬ್ಬಂಗೆ ಗೊತ್ತಾದಾಂಗೆ ಆ ಊರ್‌ನ ಕೆಲವು ಪುಂಡರೆಲ್ಲ ಈ ಹೆಂಗ್‌ಸ್‌ನ ರುಚಿ ನೋಡಿಕೆ ಶುರು ಮಾಡ್ದೊ. ಆದರೆ ಕೆಲವುಕೆ ಮಾತ್ರ ಈ ಅಣ್ಣನ ಬಗ್ಗೆ ಬಾರೀ ಕನಿಕರ ಬಾಕೆ ಶುರು ಆತ್. ವ್ಹೋ....ಎಂತ ದೇವರಂತಾ ಮೊನ್ಸಂಗೆ ಇಂತ ಹೆಂಗ್‌ಸ್ ಸಿಕ್ಕಿತಲ್ಲಾಂತ ಮೆಲ್ಲ–ಮೆಲ್ಲ ಮಾತಾಡಿಕಾಂತಿದ್ದೊ. ಆದರೆ ಆ ಹೆಂಗಸ್ ಮಾತ್ರ ಬಾರೀ ಪತಿವೃತೆನಾಂಗೆ ಮೆರೆತ್ತಾ ಇತ್ತ್. ಇದರ ಗಂಡ ಕೂಡಾ ಬಲವಾಗಿ ನಂಬಿತ್ತ್.

ಒಂದು ದಿನ ಆ ಊರ್‌ನ ಕೆಲವು ಹುಡುಗರ್ ಸೇರಿಕಂಡ್ ಏನಾರ್ ಮಾಡಿ ಈ ವಿಷಯನ ಅಣ್ಣಂಗೆ ಗೊತ್ತಾಗುವಂಗೆ ಮಾಡೋಕುಂತ ಉಪಾಯ ಹುಡ್ಕಿದೊ. ಎಂತ ಮಾಡ್ಕುಂತ ಯೋಚನೆ ಮಾಡಿ, ಆ ಊರ್‌ಲಿ ಒಂದು ದೊಡ್ಡ ಕೆರೆ ತೆಗೆದುಂತ ತೀರ್ಮಾನ ಮಾಡ್ದೊ. ಹಾಂಗೆ ಎಲ್ಲವೂ ಸೇರಿ ಊರ ನೊಡುಲಿ ಒಂದು ಕೆರೆ ತೆಗ್ದೊ. ಕೆರೆಲಿ ತುಂಬಾ ನೀರ್ ಸಿಕ್ಕಿತ್. ಊರುನೊವುಕೆಲ್ಲ ಬಾರೀ ಕುಷಿ. ಇದರ್ಲಿ ಹೆಚ್ಚಿನ ಶ್ರಮ ಆ ಅಣ್ಣಂದೇ ಆಗಿತ್ತ್. ಕೆರೆ ಎಲ್ಲ ತೆಗ್ದ್ ಮೇಲೆ ಕೆರೆಗೆ ಒಂದು ಕಟ್ಟೆ ಕಟ್ಟುದುಂತ ತೀರ್ಮಾನ ಮಾಡ್ದೊ. ಆದರೆ ಕಟ್ಟೆ ಕಟ್ಟ್‌ಕನ ಅದ್ ನಿಲ್ಲದಾಂಗೆ ಮಾಡಿ ಆಗಾಗ ಬೀಳ್ಸೊಕುಂತ ಆ ಹುಡುಗರ್ ಒಳಂಗಿದೊಳಗೆ ಮಾತಾಡಿಕಂಡೊ. ಹಾಂಗೆ ಕಟ್ಟೆ ಕಟ್ಟಿ ಚೂರು ಎತ್ತರ ಹೋಕೋನ ಈ ಅಣ್ಣಂಗೆ ಗೊತ್ತಾಗದಾಂಗೆ ಅದರ ನೂಕಿ ಹಾಕುದು. ಇದ್ ಯಾಕೆ ಹೀಂಗೆಂತ ಎಲ್ಲವೂ ಬೇಜಾರ್ ಮಾಡ್ದೊ. ಕಡೆಗೆ ಒಬ್ಬ ಹೋಗಿ ಊರ್‌ನ ಜೋಯಿಸರೊಟ್ಟಿಗೆ ಪ್ರಶ್ನೆ ಕೇಳೋವೊಂತ ತೀರ್ಮಾನ ಮಾಡಿ, ಈ ಅಣ್ಣನೆದುರು ಒಬ್ಬನ ಪಂಚಾಂಗ ನೋಡಿಕೆ ಕಳ್ಸಿದೊ. ಅಂವ ಸುಮ್ಮನೆ ಎಲ್ಲಿಗೋ ಹೋಗಿ ಮಧ್ಯಾಹ್ನ ಆಕನ ಬಾತ್. ಎಲ್ಲವೂ ಅಂವನ ಎದರ್ ಕುದ್ದ್ ಕೇಳ್ದೊ. ಜೋಯಿಸರ್ ಎಂತ ಹೇಳ್ದಣ್ಣಾಂತ.

ಆಗ ಅಂವ ಮುಂದೇನೆ ತೀರ್ಮಾನ ಮಾಡ್ದಂಗೆ ಹೇಳ್ತ್. ಈ ಕೆರೆ ತೆಗ್ದ ಜಾಗೆ ಮುಂದೆ ಯಾರೋ ಸೂಳೆನ ಕೊಂದು ಹಾಕಿದ ಜಾಗೆ ಗಡ. ಹಾಂಗೆ ಈ ಜಾಗೆಲಿ ಕೆರೆಗೆ ಕಟ್ಟೆ ಕಟ್ಟಕೊರೆ ಗಂಡ ಅಲ್ಲದೆ 12 ಜನ ಮಿಂಡಂದಿರ ಹಿಡ್ದ್ ಹೆಂಗಸ್‌ಗ ಯಾರಾರ್ ಇದ್ದರೆ ಅವರ ಹುಡ್ಕಿ ಅವರ ಕೈಲಿ ಕಟ್ಟೆಗೆ ಕಲ್ಲ್ ಇಸ್‌ಸಕಡ. ಹಾಂಗೆ ಕಲ್ಲ್ ಇಸಿದ ಹೆಂಗಸ್‌ಗೆ ಒಂದು ತೊಲ ಚಿನ್ನದ ಗಟ್ಟಿ ಕೋಡ್ಶೊಕಡ. ಆಗ ಅದ್ ಸರಿ ಆದೆ ಗಡಾಂತ ಹೇಳ್ತ್. ಹೌದಾ ಹಾಂಗೆ ಜೋಯಿಸರ್ ಹೇಳ್ತಾ. ಎಲ್ಲಿಂದ ಅಂತ ಹೆಂಗಸ್‌ನ ಹುಡ್ಕುದುಂತ ಎಲ್ಲವೂ ತಲೆ ಬಿಸಿಲಿ ಕುದ್ದೊ. ಎಲ್ಲವರ್‌ಂದ ತಲೆ ಬಿಸಿಲಿ ಈ ಅಣ್ಣ ಕುದ್ದತ್. ಇನ್ನ್ ಎಂತ ಮಾಡ್ದು ಹೀಂಗೆ ಕುದ್ದ್ ಪ್ರಯೋಜನ ಇಲ್ಲೆ. ನೋಡ ಎಲ್ಲವೂ ಒಂದೊಂದು ಕಡೆ ಹೋಗಿ ಇಂತೋವು ಯಾರ್‍ಯಾರ್ ಒಳೊನಾಂತ ಹುಡ್ಕೊವೊಂತ, ಎಲ್ಲವೂ ಒಂದೊಂದು ಕಡೆಗೆ ಹೊರ್‍ಟೊ. ಈ ಮೊನ್ಸನೂ ಅವನ ಮನೆ ಕಡೆ ಹೋಗಿ, ಅಲ್ಲಿಂದ ಯಾವುದಾದರೂ ಊರಿಗೆ ಹೋದುಂತ ತೀರ್ಮಾನ ಮಾಡಿ ಹೋತ್.

ಮನೆಗೆ ಹೋಕನ ಯಾಗೊಳುನಾಂಗೆ ಅವನ ಹೆಣ್ಣ್ ಬಾರಿ ಪೊರ್ಲುಲಿ ಇವಂಗೆ ಚಾಯ ಎಲ್ಲ ಮಾಡಿ ಕೊಟ್ಟತ್. ಇಂದ್ ಹೆಣ್ಣ್ ಯಾಕೋ ಇವಂಗೆ ಇನ್ನೂ ಬಾರಿ ಲಾಯಿಕ್ ಕಂಡತ್. ಕಂದು ಬಣ್ಣದ ಕಳದ ಸೀರೆ ಉಟ್ಟು–ತಲೆಗೆ ಅದೆಂತದೋ ರೆಂಜಾಳದ ಹೂನ ಮಾಲೆ ಮುಡ್ದ್, ಹಣೆಗೆ ದೊಡ್ಡ

ಕುಂಕುಮದ ಬೊಟ್ಟು ಹಾಕಿ, ಹಕ್ಕಲೆ ಹೋಕನ ಈ ಹೂವುನ ಪರಿಮಳಕ್ಕೆ ಅದರ ಒಮ್ಮೆ ಹಿಡ್ಕಂಕೂತ ಇವಂಗೆ ಮನ್ಸ್‌ಲಿ ಆತ್. ಅದರೆ ಇವನ ಮೋರೆಲಿ ಕುಷಿ ತೇಳ್ದ್ದು ಇತ್ತ್‌ಲೆ. ಯಾಕೆ ತೇಳಿರೆ ಇಡೀ ಊರಿಗೆ ಬಂದ ಸಮಸ್ಯೆನ ಸರಿ ಮಾಡ್ದು ಹೇಂಗೇಂತ ಇವನ ಮನ್ಸ್‌ಲಿ ಒಳಂಗಿದೊಳಗೆ ಕೊರಿತಾ ಉಟ್ಟು. ಇವನ ಮೋರೆ ನೋಡ್ದ ಕೂಡ್ಲೆ, ಹೆಣ್ಣ್‌ಗೆ ಗೊತ್ತಾತ್. ನಮ್ಮೊವು ಯಾಕೋ ಬೇಜಾರ್‌ಲಿ ಒಳೊಂತ. ಇದರ ತಿಳ್ಳಂಕುಂತ ಯೋಚನೆ ಮಾಡಿ, ಚಾ ಕುಡಿಯಕ್ಕೆ ಕೊಟ್ಟ್, ಅಲ್ಲೆ ಹಕ್ಕಲೆ ಕುದ್ದತ್. ಇಂದನಿಯಾ .. ಯಾಕೆ ನಿಮ್ಮ ಮೋರೆ ಬಾರಿ ಚಪ್ಪೆ ಉಟ್ಟು. ಕೆಲ್ಸಕ್ಕೆ ಹೋದಲ್ಲಿ ಏನಾರ್ ತೊಂದರೆ ಆತಾ ಹೇಂಗೇಂತ ಕೇಳ್ತ್. ಗಂಡ ಹೌದುನೇ, ನಾವು ಊರ್ ನಡುಲಿ ತೆಗ್ದ ಕೆರೆಲಿ, ನೀರೇನೊ ಬಾರಿ ಸಿಕ್ಕಿತ್. ಆದರೆ ಆ ಕೆರೆಗೆ ಕಟ್ಟೆ ಕಟ್ಟಿಕಾಕನ, ಅದ್ ನಿಲ್ಲುದುಲೆ. ಆಗಾಗ ಜರ್ದ್ ಬಿದ್ದದೆ. ಯಾಕೆಂತ ಹೋಗಿ ಜೋಯಿಸರೊಟ್ಟಿಗೆ ಕೇಳಿಕಾನ, ಜೋಯಿಸರ್ ಹೇಳ್ದೊ ಗಡ. ಅಲ್ಲಿ ಯಾರೋ ಮುಂದೆ ಒಂದು ಸೂಳೆನ ಹೊಡ್ದ್ ಕೊಂದು ಅಲ್ಲಿ ಮಣ್ಣ್‌ಡಿಗೆ ಹಾಕ್ಯೊಳೊಗಡ. ಹಾಂಗಾಗಿ ಅದ್ಕೆ ಸರಿ ಆಕುತ್ತಿದ್ದರೆ ಗಂಡ ಅಲ್ಲದೆ 12 ಜನ ಮಿಂಡಂದರ ಹಿಡ್ದವು ಅಲ್ಲಿ ಹೋಗಿ ಕಲ್ಲ್ ಇಸಿರೆ ಅದ್ ಸರಿ ಆದೆಗಡಂತ ಹೇಳ್ತ್. ಅಂತವರ ಎಲ್ಲಿಂದ ಹುಡ್ಕುದು. ಅಂತೋವು ಸಿಕ್ಕಿರೆ ಅವ್ಕೆ ಒಂದು ತೊಲ ಚಿನ್ನದ ಗಟ್ಟಿ ಕೊಡೊಕುಂತ ಕೂಡ ಜೋಯಿಸರ್ ಹೇಳ್ಯಾಳೋಗಡಂತ ಹೇಳ್ತ್.

ಗಂಡನ ಮಾತ್ ಕೇಳಿ ಹೆಣ್ಣಿಗೆ ನಾ ಒಳೆಂತ ಹೇಳೊಮೊಂತ ಆತ್. ಆದರೆ, ಹೇಳಿರೆ ನನ್ನ ಗುಟ್ಟೆಲ್ಲ ಬಯಲಾದೆಂತಲೂ ಹೆದರಿಕೆ ಆಕೆ ಶುರು ಆತ್. ಹೇಳಿರೆ ಒಂದು ತೊಲ ಚಿನ್ನದ ಗಟ್ಟಿ ಸಿಕ್ಕಿದೆಲ್ಲಾಂತ ಆಸೆ ಆಕೆ ಶುರು ಆತ್. ಏನಾರ್ ಆಗಲಿ, ನನ್ನ ಗಂಡ ಪಾಪ ಎಲ್ಲಿಂತ ಹುಡ್ಕುದು. ಏನಿದ್ದರೂ ನನ್ನ ಬಾರಿ ಪ್ರೀತಿ ಮಾಡುವ ಗಂಡ. ನಾ ಸತ್ಯ ಹೇಳಿರೆ ಏನೂ ಮಾಡಿಕಿಲೆಂತ ಧೈರ್ಯಲಿ ಹೇಳೊಮೊಂತ ನಿರ್ಧಾರ ಮಾಡ್ತ್. ಹಾಂಗೆ ಗಂಡನೊಟ್ಟಿಗೆ ಹೇಳ್ತ್. ನಿಮ್ಮ ಸಮಸ್ಯೆಗೆ ನನ್ನೊಟ್ಟಿಗೆ ಪರಿಹಾರ ಉಟ್ಟು. ಆದರೆ ನೀವು ನನ್ನ ಆ ಕೆರೆ ಹಕ್ಕಲೆ ನಿಮ್ಮೂರ್‌ನ ಎಲ್ಲಾ ಜನ ಇರುವವರ ಹಕ್ಕಲೆ ಕರ್ಕಂಡ್ ಹೋಕುಂತ ಹೇಳ್ತ್. ಯಾಕೆ ತೇಳಿರೆ ಎಲ್ಲರೆದುರು ನಾ ಹೇಳಿರೆ ಗಂಡ ನಂಗೆ ಏನೂ ಮಾಡಿಕಿಲೆಂತ ಒಂದು ಭಂಡ ಧೈರ್ಯ ಕೂಡ ಇತ್ತ್. ನೀ ಎಂತ ಪರಿಹಾರ ಕೊಡ್ದು, ಇದೆಲ್ಲ ನಿಂಗೆ ಆಗದ ಕೆಲ್ಸ. ಯಾರಾದರೂ ಅಂತೊವು ನಿಂಗೆ ಗೊತ್ತಿದ್ದರೆ ಹೇಳ್ಂತ ಗಂಡ ಹೇಳ್ತ್. ಅದೇ ಗೊತ್ತುಟು. ಆದರೆ ಇಲ್ಲಿ ಹೇಳ್ದುಲೆ. ನೀವು ನನ್ನ ಕೆರೆ ಹಕ್ಕಲೆ ಕರ್ರೊಂಡ್ ಹೋಗಿ ಅಲ್ಲೇ ಹೇಳಿನೆ. ನೀವು ಒಬ್ಬ ಇರಿಕನ ಹೇಳಿರೆ ನಂಗೆ ಚಿನ್ನ ಕೊಡಿಕಿಲೆಂತ ಗಂಡನ ಒತ್ತಾಯ ಮಾಡಿ ಕರ್ಕಂಡ್ ಹೋತ್.

ಊರ್‌ನೊವೆಲ್ಲ ಈ ಗಂಡ ಹೆಣ್ಣ್ ಬಾದರ ನೋಡಿ, ಎಂತಣ್ಣಂತ ಕೇಳ್ದೊ. ಅಂತ ಹೆಂಗಸ್‌ನ ನನ್ನ ಹೆಣ್ಣ್‌ಗೆ ಗೊತ್ತುಟುಗಡ. ನೀವೆಲ್ಲ ಕೆರೆ ಹಕ್ಕಲೆ ಬನ್ನಿಂತ ಕರ್ಕಂಡ್ ಈ ಮೊನ್ನ ಹೋತ್. ಅಲ್ಲಿಗೆ ಎತ್ತಿದ ಕೂಡ್ಲೆ ಈ ಹೆಂಗಸ್ ಹೇಳ್ತ್ ಗಡ. ನೀವೆಲ್ಲ ಊರುರು ಹುಡ್ಕುದು ಬೇಡ. ನಂಗೆ ಗಂಡ ಅಲ್ಲದೆ 11 ಜನರೊಟ್ಟಿಗೆ ಈಗಾಗಲೇ ಸಂಬಂಧ ಆಗುಟು. ಇನ್ನ್ ಒಬ್ಬ ಆಕು. ನೀವು ಯಾರಾರ್ ಒಪ್ಪಿರೆ ಅದರ ಇಲ್ಲೆ ಮುಗ್ಸುವೊ. ಆಗ ಹನ್ನೆರಡ್ ಜನ ಆದೆ. ಆ ಮೇಲೆ ನಾ ಕೆರೆ ಕಟ್ಟೆಗೆ ಕಲ್ಲ್ ಇಸಿನೆ. ನಂಗೆ ನೀವೆಲ್ಲ ಒಂದು ತೊಲ ಚಿನ್ನದ ಗಟ್ಟಿ ಕೊಡೋಕುಂತ ಯಾವುದೇ ಮುಜುಗರ ಇಲ್ಲದೆ ಹೇಳ್ತ್ ಗಡ. ಹೆಣ್ಣ್‌ನ ಮಾತ್ ಮುಗಿಯೋಕರೆ ಗಂಡ ನಿಂತಲ್ಲಿಂದ ತಲೆಗೆ ಕೈ ಹೊತ್ತ್ ಅಲ್ಲೆ ಕುದ್ದತ್‌ಗಡ. ನನ್ನ ಹೆಣ್ಣ್ ಬಾರೀ ಪತಿವೃತೆಂತ ನೆನ್ಸಿದ ನಂಗೆ ಇದ್ ಇಂದ್ ಎಲ್ಲರೆದ್‌ರ್ ಹುಗ್ಗ್ ಕೊಟ್ಟತಲ್ಲಾಂತ, ಕಲ್ಲ್‌ನಾಂಗೆ ಕುದ್ದತ್‌ಗಡ. ಆ ಹೊತ್ತಿಗೆ ಆ ಊರ್‌ನ ಹುಡ್ಗರೆಲ್ಲ ಸೇರಿ, ಸಮಾಧಾನ ಮಾಡ್ದೊಗಡ. ಅಣ್ಣಾ, ನೀವು ದೇವ್ರುರಂತ ಮೊನ್ನ ನಿಮ್ಮ ಹೆಣ್ಣ್ ಈ ರೀತಿ ಅನಾಚಾರ ಮಾಡ್ದರ ನೀವ್ಗೆ ಹೇಳಿಕಾಗದೇ ನಾವೆಲ್ಲ ಈ ತರ ನಾಟಕ ಮಾಡಿ, ನಿಮ್ಮ ಹೆಣ್ಣ್‌ನ ಬಾಯಿಂದಲೇ ಬರ್ಲಿಂತ ಮಾಡಿದ್. ನೀವು ಬೇಜಾರ್ ಮಾಡ್ಬೋಡಿಂತ ಸಮಾಧಾನ ಮಾಡ್ದೊಗಡ. ಇನ್ನ್ ಮುಂದೆಯಾದರ್ ನಿಮ್ಮ ಹೆಣ್ಣ್‌ನ ಜಾಗ್ರತೆಲಿ ನೋಡಿಕಣಿ. ಒಂದು ಗಾದೆ ಹೇಳುವೆ. ಅಣ್ಣಾ, ಅದೆಂತ್ ಹೇಳಿರೆ ಬಾರೀ ಲಾಯಿಕ್ ಇರುವ ಹೆಣ್ಣ್, ಗಂಡಂಗೆ ವೈರಿಯಾಗಿದ್ದದೆ ಗಡ. ಅಂದರೆ ಈ ಅರ್ಥಲಿ, ಲಾಯಿಕ್ ಇರುವ ಹೆಣ್ಣಿಗೆ, ನಾ ಲಾಯಿಕ್‌ಂತ ಅಹಂಕಾರ ಇದ್ದದೆ. ನನ್ನ ನಾಲ್ಕ್ ಜನ ನೋಡುವೆಂತ ಗೊತ್ತಾದರೆ, ಅದರ ಎಲ್ಲವೂ ಹೊಗಳಿಕೆ ಶುರು ಮಾಡಿರೆ, ಹೆಣ್ಣ್ ಬಾರೀ ಬೇಗ ದಾರಿ ತಪ್ಪಿದೆಂತ ಹಿರಿಯೋವು ಹೇಳುವೆ. ನೀವ್ಗೆ ಮನಸ್ಸಿದ್ದರೆ, ನಿಮ್ಮ ಹೆಣ್ಣ್‌ನೊಟ್ಟಿಗೆ ಮುಂದೆ ಲಾಯಿಕ್‌ಲಿ ಬಾಳಿ. ಸತ್ಯ ಒಂದಲ್ಲ ಒಂದು ದಿನ ಹೊರಗೆ ಬಂದೇ ಬಂದದೆಂತ ಇರುದಕ್ಕೆ ಈ ಕಥೆ ಸಾಕ್ಷಿಯಾಗಲಿ.

****

# 22. ಕೊತ್ತಿ – ನಾಯಿ



ಪ್ರತಿಯೊಬ್ಬ ಹಿಂದುಗಳ ಮನೇಲಿ ಕೊತ್ತಿ–ನಾಯಿನ ಸಾಂಕದೊವೇ ಇಲ್ಲೆ. ಒಂದೊಂದು ಮನೇಲಿ 3–4 ನಾಯಿಗ, 5–6 ಕೊತ್ತಿಗ ಇರ್ದು ವಿಶೇಷ ಏನೂ ಅಲ್ಲ. ಕೆಲವುಕೆ ನಾಯಿಗಳ ಸಾಂಕುದೇ ಒಂದು ಮರ್ಲ್. ಅವರವರ ಲೆವೆಲ್‌ಗೆ ಸರಿಯಾಗಿ ನಾಯಿಗಳ ಸಾಂಕುವೆ. ಕೆಲವುಕೆ ಬೇಟೆ ನಾಯಿಗಳ ಸಾಂಕುದು ಮರ್ಲ್ ಆದರೇ, ಕೆಲವುಕೆ ಮನೆಗೆ ಬಂದರೆ ಅವುಕೆ ಕಚ್ಚಕು. ನಾಲ್ಕ್ ಜನ ಹೇಳಿಕಾಂಬ ಹಾಂಗೆ ಆಕು. ಓ ಅಣ್ಣಾ ಅವರ ಮನೆಗೆ ಮಾತ್ರ ಹೊಕೆ ಬೊತ್ತ್. ಅವರ ಮನೇಲಿ ಎರಡ್ ಕಚ್ಚುವ ನಾಯಿಗ ಒಳೋ. ಅವು ಸಿಗ್ದೇ ಹಾಕುವಂತ. ಆಗ ಮನೆವಂಗೆ ಬಾರಿ ಕುಷಿ ಆದು. ಇನ್ನ್ ಕೆಲವು ಜನ ಹೇಳುವೊ ನಮ್ಮಲ್ಲಿ ನಾಯಿ ಬೊಗಳಿರೆ ಸಾಕಣ್ಣ ಯಾರೋ ಬಂದಳೊಂತ ಗೊತ್ತಾದರೆ ಸಾಕ್, ಬಂದೊವುಕೆ ಕಚ್ಚಿಕಾಗದ್‌ಂತ. ಹೀಂಗೆ ಒಬ್ಬೊಬ್ಬರ್‌ದ್ ಒಂದೊಂದು ಅಭಿಪ್ರಾಯಗ. ಇನ್ನ್ ಕೆಲವು ಜನಕ್ಕೆ ನಾಯಿಗಳ ಸಾಂಕಿ ಅದರ್‌ಂದ ಬಹುಮಾನ ತಕಂಬೊದು ಕೂಡಾ ಉಟ್ಟು.

ಈಗ ನಾಯಿ ಮತ್ತೆ ಕೊತ್ತಿಗಳ್ಲಿ ಬೇರೆ ಬೇರೆ ಜಾತಿಗಂತ ಒಳೊ. ನಾಯಿಗಳ್ಲಿ ಜಾತಿ ನಾಯಿ ಮತ್ತೆ ನಾಯಿ ಜಾತಿಂತ ಎರಡ್ ಬಗೆ. ಜಾತಿ ನಾಯಿಂತೇಳಿರೆ ಅದ್ಕೆ ವಿಶೇಷವಾಗಿ ಗೂಡು ಆಕು. ಮಲ್ಗಿಕೆ ಹಾಸಿಗೆ ಇದ್ದರೂ ಆದು. ತಿಂಬಕೆ ಮಾಸ, ಹಾಲ್, ಮೊಟ್ಟೆಂತ ಬೇಕು. ಅದರೊಟ್ಟಿಗೆ ಅಂಗಡಿಂದ ಪಿಡಿಗಿರಿಂತ ಎಲ್ಲಾ ತಂದ್ ಕೆ.ಜಿ.ಕಟ್ಟಲೆ ತಿನ್ಸಿವೆ. ಕೆಲವು ಜನ ಒಟ್ಟಿಗೆ ಮಲ್‌ಗಿಸಿಕಂಬೋವು ಕೂಡಾ ಒಳೊ. ಇನ್ನ್ ನಾಯಿ ಜಾತಿಗ ಹೇಂಗೆತೆಳಿರೆ ಅದರ ಕಂತ್ರಿ ನಾಯಿಗಂತ ಸಸಾರಲಿ ಕರ್ದವೆ. ನಿಜವಾಗಿ ನೋಡಿರೆ ಅದ್ ಕಂತ್ರಿ

ನಾಯಿಗ ಅಲ್ಲಂತ. ಸುಳ್ಯದ ಎನ್.ಎಮ್.ಸಿ. ಕನ್ನಡ ಮಾಸ್ಟ್ರ ಸಂಜೀವ ಕುದ್ಪಾಜೆ ಮಕ್ಕಳೊಟ್ಟಿಗೆ ಹೇಳುವೆಗಡ. 'ಮಕ್ಕಳೇ........ ಅದೇ ಕಂತ್ರಿ ನಾಯಿಗಂತ ಸಸಾರಲಿ ಕರಿಬೇಡಿ, ಅದ್ ನಾಯಿಗಂತೆಳಿರೆ ದೇಶಿಯ ನಾಯಿಗ. ಇಂಗ್ಲೀಷಿನ Country ನಾಯಿಗ. ನಮ್ಮ ದೇಶದ ಬಾರೀ ಪ್ರೀತಿ, ವಿಶ್ವಾಸ ಇಸಿಕಂಬ ನಾಯಿಗಂತ'. ಮಕ್ಕಳಿಗೆ ಪಾಠ ಮಾಡಿಕನ ಹೇಳುವೆ ಗಡ. ಅದ್ ಹೌದುಂತ ನನ್ನ ಮನ್ಸಿಗೂ ಆಗಿ, ನಾನು ಕೂಡಾ ಅದರ ಮಕ್ಕಳಿಗೆ ಪಾಠ ಮಾಡಿಕನ ಹೇಳ್ತಾ ಒಳೆ. ಇಂತ ಕಂತ್ರಿ ನಾಯಿಗಳಿಗೆ ಪಾಪ ಏನೂ ಬೇಡ. ಮಲ್ಗಿಕೆ ಹರ್ದಗೋಣಿ, ಮತ್ತೆ ಚೆಲ್ಲ್ ಹೆಡೆಗೆ ಇದ್ದರೆ ಸಾಕ್. ತಿಂಬಕೆ ಮಾಸನೇ ಆಕುಂತ ಇಲ್ಲೆ. ತೆಳಿ, ಗಂಜಿಯಾದರೂ ಕೊಟ್ಟದರ ಪಳ್ಕ್..... ಪಳ್ಕಂತ ತಿಂದ್ ಹಾಂಗೆ ಯಜಮಾನನ ನಿಯಂತ್ರಲಿ ನೋಡಿಕಾಂಬೊ. ಒಮ್ಮೆ ಅವ್ಕೆ ಗಂಜಿ ಹಾಕಿ ಸಾಂಕಿರೆ ಸಾಕ್, ಅದು ಸಾಯಕನ ಮುಟ್ಟ ಆ ಗಂಜಿ ಹಾಕಿದವನ ಮರೆಕಿಲೆ.

ಇನ್ನ್ ಕೊತ್ತಿಗಳ ಕತೆ ಹೇಳಿರೆ, ಅದ್ ಬೇರೇನೇ ಉಟ್ಟು. ಕೊತ್ತಿಗಳ್ನ ಕೂಡಾ ಕಂತ್ರಿ ಕೊತ್ತಿಗಂತೆಳಿರೆ ಸಾಮಾನ್ಯವಾಗಿ ಸಾಧಾರಣ ಮೈಕಟ್ಟಿನ ಚಲ್ಪಟೆ ಕೊತ್ತಿಗಳೂ ಒಳೊ. ಇನ್ನ್ ಮೈ ತುಂಬಾ ರೋಮ ತುಂಬಿಕಂಡ್ ಬಣ್ಣ ಬಣ್ಣದ ಕೊತ್ತಿಗಳೂ ಒಳೊ. ಇಲ್ಲಿ ಕೂಡಾ ಮನೆಲಿದ್ದ, ಗದ್ದೆ ಕರೇಲಿದ್ದ ಎಲಿ–ಹೆಗ್ಗಣಗಳ ಹಿಡ್ಯೆಕರೆ ಇಂತ ಚಲ್ಪಟೆ ಕೊತ್ತಿಗಳೇ ಆಕು. ಆ ದೊಡ್ಡ ದೊಡ್ಡ ಬಾಲದ, ಮೈ ತುಂಬ ರೋಮ ಇರುವ ಕೊತ್ತಿಗ, ಹೊಟ್ಟೆ ತುಂಬ ಹಾಲ್–ತುಪ್ಪಂತ ತಿಂದ್ ಬೊಬ್ಬುಸಗಳಾಂಗೆ ಎಲ್ಯರಾ ಬಿದ್ದ್‌ಕಾಂಬೊ. ಅವು ನೋಡಿಕೆ ಮಾತ್ರ ಲಾಯಿಕ್‌ಂತಲ್ಲದೆ ಅವುಗಳ್‌ಂದ ದೊಡ್ಡ ಪ್ರಯೋಜನ ಇಲ್ಲೆ. ಅದ್ಕೆ ತುಳುಲಿ ಒಂದು ಗಾದೆಯುಟ್ಟು – "ಮಣ್ಣ್‌ತ ಪುಚ್ಚೆಲಾ ಆವು, ಕಲ್ಲ್‌ತ ಪುಚ್ಚೆಲಾ ಆವು, ಒಟ್ಟು ಅವು ಎಲಿ ಪತ್ತೊಡು ಆತೆ"ಂತ. ಅದ್ಕೆ ಕಂತ್ರಿ ಕೊತ್ತಿಗಳೇ ಆಕು.

ಹೀಂಗೆ ಎಲ್ಲಿವರಲ್ಲಿ ಇದ್ದಾಂಗೆ ಒಂದು ಮನೇಲಿ ಒಂದು ಕೊತ್ತಿ ಮತ್ತೆ ಒಂದು ನಾಯಿ ಇತ್ತ್‌ಗಡ. ಬಾರೀ ಸತ್ಯ ಕಾಲಲಿ ಮನೆಂದ ಹೊರಗೆಲ್ಲ ಕಾವಲ್ ನಾಯಿ ನೋಡಿಕಂಡಿರೆ; ಮನೆ ಒಳಗೆನ ಜಾಗ್ರತೆ ಎಲ್ಲಾ ಕೊತ್ತಿ ಮಾಡ್ತಿತ್‌ಗಡ. ಹೀಂಗೆ ಒಂದು ದಿನ ಒಂದು ಮನೆಂದ ಗಂಡ, ಹೆಣ್ಣ್, ಮಕ್ಕಂತ ಎಲ್ಲೋ ದೂರದ ನೆಂಟ್ರ ಮನೆಗೆ ಹೊರ್ಟ್ಯೋ ಗಡ. ಹೊರ್ಡಿಕಾಕನ ಮನೇವು ನಾಯಿ ಮತ್ತೆ ಕೊತ್ತಿನ ಕರ್ದ್ ಹೇಳ್ದೋಗಡ. ಇಂದನಿ, ಇಂದ್ ನಾವು ದೂರದ ನೆಂಟ್ರಮನೆಗೆ ಎಲ್ಲವೂ ಹೋದವೆ. ಇಂದ್ ನಾವ್ಗೆ ವಾಪಾಸ್ಸ್ ಬಾಕೆ ಆದುಲೆ. ಅದ್ದ್‌ರ್‌ಂದ ನೀವು ಮನೆಕಡೆ ಬಾರೀ ಜಾಗೃತೆ ಇರೋಕು. ಅಲ್ಲಿ ಒಳಗೆ ಕುಕ್ಕೆಲಿ, ಅಕ್ಕಿ– ಭತ್ತ ಎಲ್ಲಾ ತುಂಬಿಸಿ ಅಟ್ಟಲಿ ಇಸಿಕೊಂಡುಟು. ಅದರೆಲ್ಲಾ ಒಟ್ಟೆ ಮಾಡಿ ತಿಂಬೊ, ಜಾಗೃತೆಂತ ಹೇಳಿ ನೆಂಟ್ರಮನೆಗೆ ಹೋದ್ರೊಗಡ.

ನಾಯಿನೂ ಕೊತ್ತಿನೂ ಅವು ಹೋದ ಮೇಲೆ ಬಾರೀ ಜಾಗ್ರತೆಲಿ ಮನೆ ಕಡೆ ನೋಡಿಕಂಡೊಗಡ. ಹೊರ್ಡಿಕನ ಇವು ಇಬ್ಬರಿಗೂ ಬೇಕಾದಾಂಗೆ ತಿಂಬಕೆ ಎಲ್ಲಾ ಕೊಟ್ಟು ಹೋಗೋಳೊ. ಇವಿಬ್ಬರೂ ಸರೀ ಹೊಟ್ಟೆ ತುಂಬಾ ತಿಂದದರ್‌ಂದ ಕುದ್ದ್..... ಕುದ್ದ್ ನಿದ್ರೆ ಬಂದದೇ ಗೊತ್ತಾತ್ಲೆಗಡ. ನಾಯಿ ಮನೇನ ಜಾಲ್‌ಲಿ ಮಲ್ಗಿದ್ದೈಕೆ ಅಲ್ಲೇ ನಿದ್ದೆ ಬಂದುಟು. ಹಾಂಗೇ ಕೊತ್ತಿಗೆ ಒಲೆ ಚಿಟ್ಟೇಲಿ ಮಲ್ಗಿದಕ್ಕೆ ಅಲ್ಲೇ ನಿದ್ದೆ ಹೋಗುಟು. ನಡೀರ್ಲ್ಗಾಕನ ನಿದ್ದೆ ಮಾಡ್ದ ನಾಯಿಗೆ ಮನೆ ಒಳಗೆಂದ ಎಂತದೋ ದೊಡ್ಡ ಶಬ್ದದೊಟ್ಟಿಗೆ ಬಿದ್ದಾಂಗೆ ಕೇಳ್ತ್‌ಗಡ. ನಾಯಿ ರಪ್ಪ ಎದ್ದ್ ಮೈ ಕೊಡ್ಕಿ, ಕೊತ್ರಿನ ಕರ್ತ್‌ಗಡ. ಏ .... ಬಿಲ್ಲಿ....ಬಿಲ್ಲಿ ಮನೆ ಒಳಗೆಂದ ಎಂತದೋ ಬಾರೀ ಶಬ್ದಲಿ ಬೀತ್. ನೀ ಎದ್ದ್ ಒಮ್ಮೆ ಹುಡ್ಕುಂತ ಹೇಳ್ತ್‌ಗಡ. ನಿದ್ದೆ ಮಾಡಿಕಂಡಿದ್ದ ಕೊತ್ತಿಗೆ ನಾಯಿ ಕರೆದರ ಕೇಳಿ ಒಮ್ಮೆಗೆ ಎಚ್ಚರಿಕೆ ಅತ್‌ಗಡ. ಎದ್ದ್ ಒಮ್ಮೆ ಮೈನ ನೀಟ ನೀಂಡಿ ಓ ದೇವ್ರೆ ನಂಗೆ ಎಂತ ನಿದ್ದೆ ಬಂದ್‌ದ್‌ಂತ ನೆನ್ಸಿಕಂಡ್ ಮನೆ ಎಲ್ಲಾ ಹುಡ್ಕಿತ್‌ಗಡ. ಹಾಂಗೆ ಹುಡ್ಕಿಕನ ನಡು ಒಳಗೆ ಅಟ್ಟಂದ ಒಂದು ಸಾಸಿವೆ ಬಿದ್ದ್‌ದ್ ಕಂಡತ್‌ಗಡ. ಅದರ ನೋಡಿ ಬಿಲ್ಲಿ ಕೊತ್ತಿ ನಾಯಿನೊಟ್ಟಿಗೆ ಹೇಳ್ತ್‌ಗಡ. ಅದ್ ಎಂತಿಲ್ಲೆ, ಅಟ್ಟಂದ ಒಂದು ಸಾಸಿವೆ ಹೇಂಗೋ ಕೆಳಗೆ ಬಿದ್ದುಟುಂತ.

ಈ ಕಥೆಂದ ನಾವುಗೆ ಎನ್ ಅರ್ಥ ಅದೇಂತೇಳಿರೇ ಮನೆ ಒಳಗೆ ಒಂದು ಸಾಸಿವೆ ಬಿದ್ದರೂ ಹೊರಗೆ ಮಲ್ಗಿದ ನಾಯಿಗೆ ಅದ್ ದೊಡ್ಡ ಶಬ್ದ ಕೇಳ್ದ್. ಅದರ ಕೆಬಿ ಅಷ್ಟ್ ಸೂಕ್ಷ್ಮ. ಹಾಂಗೆ ಇರ್‌ಲೆಲ್ಲಾ ನಾಯಿನ ಕೆಬಿ ಶುದ್ಧಲಿ ಇದ್ದ್, ಒಂದ್ ದರ್ಗ್ಗ ಬಿದ್ದರೂ ನಾಯಿ ಬೊಗ್‌ಳ್‌ದೆ. ಹಾಂಗೆ ಮನೆ ಒಳಗೆ ಇರುವ ಕೊತ್ತಿಗೆ ಒಂದು ಸಾಸಿವೆ ಬಿದ್ದರೂ ಕರಿ ಕತ್ತಲೆಲಿ ಅದರ ಕಣ್ಣಿಗೆ ಕಂಡದೆ. ಹಾಂಗಾಂಗಿ ಅದರ ಕಣ್ಣ್ ಅಷ್ಟ್ ಶುದ್ದಾಂತ. ಹೀಂಗೆ ಈಗಳೂ ನಾವು ನಾಯಿನ ಮತ್ತೆ ಕೊತ್ತಿನ ನಮ್ಮ ರಕ್ಷಣೆಗಾಗಿ ಸಾಂಕುವೆ. ಎನಿದ್ದರೂ ಇದೆಲ್ಲಾ ಈ ಪ್ರಕೃತಿ ಹಾಗೂ ದೇವರ ಸೃಷ್ಟಿಂತ ನಾವು ಒಪ್ಪಿಕಣಕಾದೆ. ಮನುಷ್ಯಂದ ಇದರೆಲ್ಲಾ ಸರಿ ಮಾಡಿಕೆ ಸಾಧ್ಯ ಇಲ್ಲೆಂತ ಹೇಳ್ದು ಸತ್ಯ.

****

# 23. "ನಾಈ"



ಮನುಷ್ಯನ ಆರಂಭದ ಹುಟ್ಟು, ಇತಿಹಾಸನ ತಿಳ್ಕಂಕೆ ಪ್ರಯತ್ನಪಟ್ಟರೆ, ನಾವು ಹಿಂದೆ ಓದಿದರ್ಲಿ ನೆಂಪಾಗಿ ಒಳ್ದದ್‌ಂತೇಳಿರೆ, 'ಮಂಗನಿಂದ ಮಾನವ'; ಅಂದರೆ ಮೊನ್ಸ ನೋಡಿಕೆ ಕುರೆನಾಂಗೆ ಇತ್ತ್. ಈಗಳೂ ಹಾಂಗೆ ಒಳದ್. ಆದರೆ ಬಾಲ ಮಾತ್ರ ಇಲ್ಲೆಂತ ಹೇಳಕ್. ಮುಂದೆ ಮೊನ್ಸ ಕೂಡಾ ಕಾಡ್ ಪ್ರಾಣಿಗಳೊಟ್ಟಿಗೆ ಹಸಿ ಮಾಸ, ಗೆಡ್ಡೆಗೆಣ್ಸ್ ತಿಂದ್‌ಕಂಡ್, ಯಾವುದೋ ಕಾಡ್‌ಲಿದ್ದ ಬಾಂಜರಗಲ್ಲಿ ಬೊದ್ಕೆಂಡಿತ್ತ್‌ಂತ ಹೇಳುವೆ. ಹಾಂಗೆ ಬೆಳ್ದ್–ಬೆಳ್ದ್ ಕೃಷಿಂತ ಕಂಡ್‌ಕಂತ್. ಬರಬರುತ್ತಾ ಅವನ ಬದ್ಕ್‌ನ ಅನುಭವವೇ ಮೊನ್ಸನ ಬುದ್ದಿನೂ ಬೆಳೆಕ ಸಾಧ್ಯ ಆತ್‌ಂತ ಹಿರಿಯೋವು ಹೇಳುವೆ.

ಮೊನ್ಸ ಈ ಕಾಡ್–ಮರ, ಮೃಗ–ಪಕ್ಷಿಂತ, ಕಾಡ್‌ಲೇ ಬಿದ್ದಿದ್ದಂವ ಶುರುಗೆ ಪ್ರಾಣಿಗಳಾಂಗೆ ಅವರೊಟ್ಟಿಗೆ ಬದ್ಕಿತ್. ಅವು ಮಾಡ್ದಾಂಗೆ ಮೊನ್ಸನೂ ಮಾಡಿಕೆ ಶುರು ಮಾಡ್ತ್. ಅವು ಕೋಣಿದರ ನೋಡಿ ಮೊನ್ಸನೂ ಕೋಣಿಕೆ ಅಭ್ಯಾಸ ಮಾಡ್ತ್. ಅವು ಬೇರೆ ಬೇರೆ ಸ್ವರಲಿ ಹಾಡ್ದರ ಕೇಳಿ ಮೊನ್ಸನೂ ಅವನ ಸ್ವರಲಿ ಪದ್ಯ ಹೇಳಿಕೆ ಶುರು ಮಾಡ್ತ್. ಆಮೇಲೆ ಅವನ ಬುದ್ಧಿ ಬೆಳಿತಾ.... ಬೆಳಿತಾ ಅಂವ ಬುದ್ಧಿ ಜೀವಿಂತ ಕರ್ಸಿಕಂಡತ್. ಎಲ್ಲಾ ಒಟ್ಟಿಗೆ ನೋಡಿರೆ ಈ ಪ್ರಕೃತಿನೇ ಮೊನ್ಸಂಗೆ ಗುರು ಆಗಿತ್ತಾಂತ ಹೇಳ್ದರ್ಲಿ ಎರಡ್ ಮಾತಿಲ್ಲೆ.

ಹೀಂಗೆ ಈ ಮೃಗಗಳ ಒಟ್ಟಿಗೆ ಬೊದ್ಕಿದ ಮೊನ್ಸಂಗೆ ಅವರ ಒಡನಾಟ ಈಗಳೂ ಬುಡಿಕೆ ಆತ್‌ಲೆ. ಹಾಂಗಾಗಿ ನಾವು ದನ ಸಾಂಕುದು, ನಾಯಿ ಸಾಂಕುದು, ಕೋಳಿ ಸಾಂಕುದು, ಆಡು–ಕುರಿ, ಕೊತ್ತಿಗಳ ಸಾಂಕುದು ಬುಟ್ಟತ್ತಿಲೆ. ಅದರ್ಲೂ ನಾವು ನಾಯಿತೇಳುವ ಪ್ರಾಣಿಗಳೊಟ್ಟಿಗೆ ಇರುವ ಪ್ರೀತಿ–ಒಡನಾಟ ಬೇರೆ ಯಾವುದರೊಟ್ಟಿಗೂ ಇಲ್ಲೆ. ಅದರ ಬಾರೀ ನಾವು ಪ್ರೀತಿ ಮಾಡುವೆ. ಹಾಂಗೆ ಅವು ಕೂಡಾ ನಮ್ಮ ಪ್ರೀತಿ ಮಾಡುವೆ. ಅಷ್ಟ್ ಮಾತ್ರ ಅಲ್ಲ

ಅದರ ಸಾಂಕಿದ ಪ್ರತಿಫಲವಾಗಿ ಅದ್ ನಮ್ಮೊಟ್ಟಿಗೆ ಯಾಗೋಳು ನಮ್ಮ ರಕ್ಷಕನಾಗಿ ನಮ್ಮೊಟ್ಟಿಗೆ ಇದ್ದದೆ. ಒಮ್ಮೆ ಅದ್ಕೆ ಗಂಜಿ ಹಾಕಿ ಸಾಂಕಿರೆ ಅದ್ ಜೀವ ಇರುವವರೆಗೆ ನಮ್ಮ ಮರೆಯೋದಿಲ್ಲೆ. ಹಾಂಗೆನೇ ಅದರ ಪ್ರತಿಯೊಬ್ಬ ಮೊನ್ಸ ಬಾರೀ ನಂಬಿಕೆಂದ ಸಾಂಕುವೆ. ಅದ್ ನಮ್ಮೊಟ್ಟಿಗೆ ಇದ್ದದೆ.

ಇಂತ ಈ ಪ್ರಾಣಿನ ಸೃಷ್ಟಿನ ಬಗ್ಗೆ ಒಂದು ಕಥೆ ಹೇಳ್ತಾ ಒಳೆ. ಮತ್ತೆ ಅದ್ಕೆ ನಾಯಿಂತ ಯಾಕೆ ಹೆಸರ್ ಬಾತ್ಂತೇಳ್ದರ ಈ ಕಥೆಲಿ ಹೇಳಿನೆ. ಒಮ್ಮೆ ಬ್ರಹ್ಮ ಈ ನಾಯಿಂತ ನಾವು ಕರೆದ ಪ್ರಾಣಿನ ಒಂದರ ಸೃಷ್ಟಿ ಮಾಡ್ತ್‌ಗಡ. ಅದರ ನೋಡಿ ಆಕನ ಅವಂಗೇ ಬಾರೀ ಕುಷಿ ಆತ್‌ಗಡ. ಅದರ ಮೋರೆ, ಕಣ್ಣ್, ಬಾಯಿ, ಅದರ ಮೈಕಟ್ಟ್ ನೋಡಿ ತುಂಬಾ ಕುಷಿ ಆತ್. ಆ ಸಮಯಲಿ ಅಲ್ಲಿಗೆ ಶಿವ ಮತ್ತೆ ವಿಷ್ಣು ದೇವರುಗ ಬಂದೊಗಡ. ನಾವ್ಗೆಲ್ಲ ಗೊತ್ತುಟು ಈ ಸೃಷ್ಟಿಲಿ ಬ್ರಹ್ಮ, ವಿಷ್ಣು, ಮಹೇಶ್ವರರೇ ಇಡೀ ಲೋಕನ ನಡೆಸ್ತಾ ಒಳೊಂತ. ಬ್ರಹ್ಮಂಗೆ ಸೃಷ್ಟಿ ಮಾಡುವ ಕೆಲ್ಸ ಆದರೆ, ವಿಷ್ಣು ದೇವರು ಅದರ ಪಾಲನೆ ಮಾಡ್ದು. ಶಿವ ಅದರ ಸಮಯ ಮುಗಿಯಕಾಕನ ಲಯ ಮಾಡ್ದು. ಇದು ಜಗನ್ಮಾಥೆ ಆದ ಮಹಾದೇವಿ ಇವ್ಕೆ ವಹಿಸಿಕೊಟ್ಟ ಕೆಲ್ಸಗಂತ ನಮ್ಮೆಲ್ಲರ ನಂಬಿಕೆ.

ಈ ಪೊರ್ಲುನ ಪ್ರಾಣಿನ ನೋಡಿ ಆಕನ ಅವ್ಕೆ ಬಾರೀ ಕುಷಿ ಆಗಿ ವಿಷ್ಣು ಬಂದಂವ ಹೇಳ್ತ್‌ಗಡ. ಇದ್ಕೆ ಏನೇ ಅದರೂ ಅದು ನನ್ನ ಹೆಸರ್–ನಾರಾಯಣಂತ ಇಸೊಂಕುಂತ. ಆಗ ಶಿವ ಹೇಳ್ತ್‌ಗಡ. ಅದು ಆದುಲೆ ಇದ್ಕೆ ನನ್ನ ಹೆಸರೇ ಇಸೊಕು; ಶಂಕರಂತ ಹೇಳ್ತ್‌ಗಡ. ಆಗ ಸೃಷ್ಟಿ ಮಾಡ್ದ ಬ್ರಹ್ಮ ಹೇಳ್ತ್‌ಗಡ. ಅದೆಲ್ಲ ಆದುಲೆ, ಇದ್ ನಾ ಸೃಷ್ಟಿ ಮಾಡ್ದ್. ಹಾಂಗಾಗಿ ಇದ್ಕೆ ನನ್ನ ಹೆಸರೇ ಇಸುದುಂತ. ಹೀಂಗೆ ಮೂರು ದೇವರುಗ ಚರ್ಚೆ ಮಾಡಿಕೆ ಶುರುಮಾಡ್ದ್. 'ನೀ ಸೃಷ್ಟಿ ಮಾಡ್ದ್ ಏನೋ ಸರಿ. ಆದರೆ ಈ ಪ್ರಕೃತಿಲಿ ಏನೇ ಸೃಷ್ಟಿ ಮಾಡಿರೂ ಅದರ ಪಾಲನೆ ಮಾಡುವ ಕೆಲ್ಸ ನಂದ್. ಹಾಂಗಾಗಿ ನೀ ಬರೀ ಸೃಷ್ಟಿ ಮಾಡಿರೆ ಸಾಲದ್. ಅದರ ನಾ ಪಾಲನೆ ಮಾಡದಿದ್ದರೆ ಅದ್ ಹೇಂಗೆ ಬದ್ಕುದು. ಹಾಂಗಾಗಿ ಅದ್ಕೆ ನನ್ನ ಹೆಸರೇ ಇಸೊಕೂಂತ' ವಿಷ್ಣು ದೇವರ್ ಮತ್ತೊಮ್ಮೆ ಹೇಳ್ತ್. ಆಗ ಕರೇಲಿದ್ದ ಶಿವ ಹೇಳ್ತ್, 'ಅಂವ ಬ್ರಹ್ಮ ಸೃಷ್ಟಿ ಮಾಡ್ದಂವ, ನೀ ವಿಷ್ಣು ಪಾಲನೆ ಮಾಡಂವ. ನೀವಿಬ್ಬರೂ ಏನೂ ಮಾಡಿರೂ ನನ್ನ ಕೆಲ್ಸ ಕೊಲ್ಲುದು. ನಾ ಲಯಕರ್ತ, ಹಾಂಗಾಗಿ ಮನ್ಸ್ ಮಾಡಿರೆ ಅದರ ನಾ ಈಗ ಕೊಲ್ಲುವೆ. ಹಾಂಗಾಗಿ ಅದ್ಕೆ ನನ್ನ ಹೆಸರೇ ಇಸೊಕು, ಇಲ್ಲದಿದ್ದರೆ ಕೊಂದನೆಂತ' ಹೇಳ್ತ್. ಹೀಂಗೆ ಜಗಳ ಜೋರು ಜೋರು ಆಗಿ ಪೆಟ್ಟಿಗೆ ತಯಾರ್ ಆತ್‌ಗಡ.

ಇದರೆಲ್ಲ ದೂರಲಿ ನೋಡ್ತಾ ಇದ್ದ ನಾರದ ಅಷ್ಟೊತ್ತಿಗೆ ಅಲ್ಲಿಗೆ ಪ್ರತ್ಯಕ್ಷ ಆತ್. ನಾರಾಯಣ... ನಾರಾಯಣಂತ ತಾಳ ಬೊಟ್ಟಿಕಂಡ್ ಬಂದ್, ಈ ಮೂರು ದೇವರುಗಳ ಜಗಳ ನೋಡಿ ನಗಾಡ್ತ್‌ಗಡ. ಅಯ್ಯೋ ದೇವರುಗಳೇ, ನೀವೇ ಹಿಂಗೆ ಜಗಳ ಮಾಡಿಕಂಡರೆ ಹೇಂಗೆ? ಈಗ ಅಷ್ಟು  ದೊಡ್ಡ ವಿಷಯ ಆದರೂ ಏನ್‌ಂತ ಕೇಳ್ತ್. ಆಗ ಮೂರು ಜನ ದೇವರ್‌ಗೆ ಅವರವರ ವಾದಗಳ ಹೇಳ್ದೊ. ಅಷ್ಟೊತ್ತಿಗೆ ಇದರ ಕಥೆನೆಲ್ಲ ಕೇಳ್ದ ನಾರದ ಹೇಳ್ತ್‌ಗಡ. ಈ ಸಮಸ್ಯೆನ ನಾ ಸರಿ ಮಾಡಿನೆಂತ ಹೇಳಿ, ಬ್ರಹ್ಮನೊಟ್ಟಿಗೆ ಹೇಳ್ತ್‌ಗಡ. ನೀ ಇಂತ ಇನ್ನೆರಡ್ ಪ್ರಾಣಿಗಳ ಸೃಷ್ಟಿ ಮಾಡ್. ನಾ ನೀವುಗೆ ಮೂರು ಜನಂಗೂ ಒಂದು ಪರೀಕ್ಷೆ ಮಾಡಿನೆ. ಯಾರ್ ಆ ಪರೀಕ್ಷೆಲಿ ಗೆದ್ದರೆನೋ ಅವರ ಹೆಸರ್‌ನ ಈ ಪ್ರಾಣಿಗೆ ಇಸೊಮೊಂತ. ಹಾಂಗೆ ಬ್ರಹ್ಮ ಇನ್ನೆರಡ್ ಪ್ರಾಣಿಗಳ ಸೃಷ್ಟಿ ಮಾಡ್ತ್‌ಗಡ. ಹಾಂಗೆ ಮಾಡ್ದ ಪ್ರಾಣಿಗಳ ಒಬ್ಬೊಬ್ಬನೊಟ್ಟಿಗೆ ಒಂದೊಂದರ ಕೊಟ್ಟ್ ಹೇಳ್ತ್‌ಗಡ. ಈ ಪ್ರಾಣಿಗಳ ನೀವು ಒಬ್ಬೊಬ್ಬ ಒಂದೊಂದು ಕಡೆ ತಕ್ಕಂಡ್ ಹೋಗಿ ಇದರ ಡೊಂಕಾದ ಬಾಲನ ಸೊರ್ತ ಮಾಡಿ ತರೋಕುಂತ.

ಈ ಪರೀಕ್ಷೆಗೆ ಮೂರು ಜನ ಕೂಡಾ ಒಪ್ಪಿಗೆ ಕೊಟ್ಟ್ ಮೂರು ಜನ ಮೂರು ಪ್ರಾಣಿಗಳ ಒಂದೊಂದು ಕಡೆ ತಕ್ಕಂಡ್ ಹೋದೋಗಡ. ಹಾಂಗೆ ಹೋಗಿ ಅದರ ಬಾಲನ ಸರ್ತ ಮಾಡಿಕೆ ನೋಡ್ದೊಗಡ. ಅದರ ಬಾಲಕ್ಕೆ ವಾಟೆ ಹಾಕಿ ನೋಡ್ದ್‌ಗಡ, ಹಂಙ್ ಹೊತ್ತ್ ಎಲ್ದ್ ಸರ್ತ ಮಾಡ್ದೆಗಡ. ಅದರ ಬಾಲದ ಕೊಡಿಗೆ ಕಟ್ಟಾಕಟ್ಟಿ  ನೇಲ್ಸಿದೋಗಡ. ಎಸ್ಟ್ ಮಾಡಿರೂ ಬುಟ್ಟ್ ಆಕನ ವಾಪಾಸ್ ಬಾಲ ಡೊಂಕು ಆತಿತ್‌ಗಡ. ಕಡೆಗೆ ಸೊಲೊಪ್ಪಿಕ್‌ಂಡ್ ಈಶ್ವರ ಮತ್ತೆ ನಾರಾಯಣ ದೇವರು ವಾಪಾಸ್ಸ್ ಹಾಂಗೆ ತಂದ್ ನಾರದನೊಟ್ಟಿಗೆ ಹೇಳ್ದೆಗಡ. ನಾವ್ಗೆ ಏನ್ ಮಾಡಿರೂ ಇದರ ಬಾಲ ಸರ್ತ ಮಾಡಿಕೆ ಅದುಲೆಂತ. ಆದರೆ ಬ್ರಹ್ಮ ದೇವುರು ಮಾತ್ರ ತಕ್ಕಂಡ್ ಹೋದ ಪ್ರಾಣಿನ ಬಾಲ ಸೊರ್ತ ಮಾಡಿಕಂಡ್ ಬಂದೊಗಡ. ಇವ್ಕೆ ಇಬ್ಬರಿಗೂ ಬೇಜಾರ್ ಆತ್‌ಗಡ. ಇಂವ ಹೆಂಗೂ ಸೃಷ್ಟಿಕರ್ತ. ಬಹುಶಃ ಸೊರ್ತ ಬಾಲದ ಇನ್ನೊಂದು ಪ್ರಾಣಿನನೇ ಸೃಷ್ಟಿ ಮಾಡಿರೊಕುಂತ ನೆನ್ಸಿದೊಗಡ.

ಬ್ರಹ್ಮ ದೇವರು ಆ ಪ್ರಾಣಿನ ನಾರದನ ಕೈಲಿ ಕೊಟ್ಟು, 'ನೋಡಿ ನಾರದರೇ ಇದ್ ಬಾಲ ಸೊರ್ತ ಆಗುಟು. ಅದ್ದ್‌ರ್‌ಂದ ಇದ್ಕೆ ನನ್ನ ಹೆಸರ್‌ನೇ ಇಸೊಕುಂತ. ಈ ಬ್ರಹ್ಮನ ಸೀಂತ್ರಿನ ತಿಳ್ಕಂಡ ನಾರದ ಮೋರೆಲಿ ಅವನಷ್ಟಕ್ಕೆ ನಗಾಡಿಕಂಡತ್‌ಗಡ. ಆದರೆ ಆ ಪ್ರಾಣಿ ಮಾತ್ರ ಕುಂಯಿ... ಕುಯಿಂತ ಹೇಳ್ತಾ ಇತ್‌ಗಡ. ನಾರದ ಆ ಪ್ರಾಣಿನ ತಕ್ಕಂಡ್ ಅದರ ಬಾಲಕ್ಕೆ ಒಮ್ಮೆ ಕೈ ಆಡಿಸಿತ್‌ಗಡ. ನೋಡಿರೆ ಬಾಲದ ಅಡಿಲಿ ಒಂದು ಕೋಲು ಸಿಕ್ಕಿತ್‌ಗಡ. ಈ

ಬ್ರಹ್ಮ ದೇವರು ಇವಿಬ್ಬರಾಂಗೆ ಸೊರ್ತ ಮಾಡಿಕೆ ನೋಡಿ ಆಗದೆ ಕಡೆಗೆ ಆ ಪ್ರಾಣಿನ ಬಾಲದ ಅಡಿಗೆ ಯಾರಿಗೂ ಕಾಣದಾಂಗೆ ಉದ್ದ ಕೋಲುನ ಕಟ್ಟಿ ಸೊರ್ತ ಮಾಡಿ ಇಸಿತ್‌ಗಡ. ಇದರ ನಾರದ ಪೂಜಿ ಕೋಲುನ ತೆಗ್ತ್‌ಗಡ. ಆಮೇಲೆ ಬಾರೀ ಕೋಪಲಿ ಹೇಳ್ತ್‌ಗಡ, 'ನೋಡಿ ಬ್ರಹ್ಮ ದೇವರೇ, ನೀವೇ ಸೃಷ್ಟಿಕರ್ತ ಆಗಿದ್ದು, ಅದರ್ಲೂ ದೇವರು ಆಗಿ ಈ ರೀತಿ ಮೋಸ ಮಾಡಿಕೆ ಬಾರದಿತ್ತ್. ಹಾಂಗಾಗಿ ನೀವ್ಗೆ ಈ ಭೂಲೋಕಲಿ ಯಾರೂ ಕೂಡಾ ದೇವಸ್ಥಾನ ಕಟ್ಟಿ ನಿಮ್ಮ ಪೂಜೆ ಮಾಡದಾಂಗೆ ಆಗಲಿಂತ' ಶಾಪ ಕೊಟ್ಟತ್‌ಗಡ.

ಅಷ್ಟು ಮಾತ್ರ ಅಲ್ಲದೆ ಇವು ಇಬ್ಬರೂ ಈಶ್ವರ ಮತ್ತೆ ನಾರಾಯಣ ದೇವರು ಯಾವುದೇ ಮೋಸ ಮಾಡದೇ ಹಾಂಗೆ ತಂದುಕೊಟ್ಟಳ. ಹಾಂಗಾಗಿ ಆ ಇಬ್ಬರೂ ದೇವರುಗಳ ಹೆಸರ್‌ನ ಶುರುನ ಅಕ್ಷರಗಳ ಸೇರ್ಸಿ ಇದ್ಕೆ ಹೆಸರ್ ಇಸೊಮೊಂತ ಹೇಳಿ, ನಾರಾಯಣ ದೇವರ ಶುರುನ ಅಕ್ಷರ 'ನಾ' ಮತ್ತೆ ಈಶ್ವರ ದೇವರ ಶುರುನ ಅಕ್ಷರ 'ಈ' ಹಿಂಗೆ ಒಟ್ಟು ಸೇರ್ಸಿ 'ನಾಈ'ಂತ ಹೆಸರ್ ಇಸಿದೊಗಡ. ಹಾಂಗಾಗಿ ಈಗಳೂ 'ನಾಈ'ಗೆ ನಾವು ಕಾಲ್‌ಲಿ ಮೆಟ್ಟಿಕಾಗದ್. ಅದ್ ನಾರಾಯಣ ದೇವ್ರುಂತ ಹೇಳುವೆ. ಬರ ಬರುತ್ತಾ ನಾವೀಗ ಅಂತ ದೇವರುಗಳ ಹೆಸರ್ ಇರುವ ಆ ಪ್ರಾಣಿನ ಬಾರೀ ಸಸಾರಲಿ 'ನಾಯಿ'ಂತ ಕರ್ದ್‌ವೆ. ಒಮ್ಮೊಮ್ಮೆ ಕೋಪ ಬಾಕನ 'ನಾಯಿ ನಿನ್ನ ಹುಲಿ ಹೊರಿಕೆ'ಂತ ಶಾಪನೂ ಇಸುವೆ. ಆದರೆ 'ನಾಈ' ತೇಳ್ದು ದೇವರಿಗೆ ಸಮಂತ ಯಾರೂ ಮರೆಕಾಗದ್.

****



ಸುಳ್ಯ ತಾಲೂಕು, ಅರಂತೋಡು ಗ್ರಾಮದ, ಅಡ್ತಲೆ ಗೊರಸಿನಕೋಡಿ ದಿ। ಸುಬ್ಬಣ್ಣ ಗೌಡ, ಮತ್ತೆ ಶ್ರೀಮತಿ ದಿ। ಹೊನ್ನಮ್ಮ ಇವರ ದಾಂಪತ್ಯಲಿ ಹುಟ್ಟಿದ ಎರಡ್ ಗಂಡ್-ಮೂರು ಹೆಣ್ಣ್ ಮಕ್ಕಳ ಪೈಕಿ ಅಕೇರಿನೊವು. ಓದಿದ ಸಣ್ಣಶಾಲೆ ಅಡ್ತಲೆ ಮತ್ತೆ ಅರಂತೋಡುಲಿ. ಹೈಸ್ಕೂಲ್, ಧರ್ಮಸ್ಥಳ ಶ್ರೀ ಮಂಜುನಾಥೇಶ್ವರ ಹೈಸ್ಕೂಲ್‌ಲಿ, ಪಿಯುಸಿ ಮತ್ತೆ ಪದವಿ, ನೆಹರೂ ಮೆಮೋರಿಯಲ್ ಕಾಲೇಜು ಸುಳ್ಯಲಿ. ಎಂ.ಎ, ಮಾನಸ ಗಂಗೋತ್ರಿ ಮೈಸೂರ್ಲಿ, ಬಿ.ಎಡ್. ಪ್ರಸನ್ನ ಕಾಲೇಜು ಉಜಿರೆಲಿ. 1997 ಜನವರಿ 26ಕ್ಕೆ ಜಯಲತ ಕಾಶಿಬೆಟ್ಟು ಇವರೊಟ್ಟಿಗೆ ಮೊದ್ವೆ. 1999ರ್‌ಂದ

ಕೆ.ವಿ.ಜಿ ಶಿಕ್ಷಣ ಸಂಸ್ಥೆಲಿ ಉದ್ಯೋಗ. ಹತ್ತು ವರ್ಷ ಎ.ಒ.ಎಲ್.ಇ (ರಿ) ಇದರ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಯಾಗಿ ಕೆಲ್ಸ ಮಾಡ್ದೊವು, 2009 ರ್‌ಂದ ಕೆ.ವಿ.ಜಿ ಐ.ಟಿ.ಐ ಲಿ ಉದ್ಯೋಗಿಯಾಗಿ, ಕಳೆದ 23 ವರ್ಷಗಳಿಂದ ಬೇರೆ ಬೇರೆ ಶಿಕ್ಷಣ ಸಂಸ್ಥೆಳಲ್ಲಿ ಅಧ್ಯಾಪನ ವೃತ್ತಿ ಮಾಡ್ತ ಒಳೊ. ಮೂಲತಃ ಕೃಷಿಕ ಕುಟುಂಬಂದ ಬಂದರೂ, ಕಾಲೇಜ್ ಜೀವನಲಿ ಇರಿಕಾಕನೇ ಕಥೆ ಕವನ, ಲೇಖನಗಳ  ಬರ್ದ ದಾಖಲೆಗ ಇವರ್ದ್. ಇವರ ಕನ್ನಡದ ಸುರುನ ಕೃತಿ “ದೀಪಾವಳಿ ಮತ್ತು ಬಲಿಯೇಂದ್ರ” 2003ರಲ್ಲಿ ಮಿತ್ರ ಬಳಗ ಕಾಯರ್ತೋಡಿ ಇವು ಪ್ರಕಟಿಸಿದೊ. 2ನೇ ಕೃತಿ "ಶ್ರೀ ಮಲ್ಲಿಕಾರ್ಜುನ ಚಿತ್ರಕಥಾ ಮಾಲಿಕೆ” 2006 ಎಪ್ರಿಲ್ 13ಕ್ಕೆ ಶ್ರೀ ಮಲ್ಲಿಕಾರ್ಜುನ ದೇವಸ್ಥಾನದೊವು ಪ್ರಕಟಿಸಿದೊ. 3ನೇ ಕೃತಿ ಆಗಿ ‘ಅಪ್ಪ ಹೇಳ್ದ ಹತ್ತ್ ಕಥೆಗ’, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿಯೊವು 2019ರಲ್ಲಿ ಪ್ರಕಟಿಸಿದೊ. ಅರೆಭಾಷೆಲಿ ಶುರುದೊಂಳೂ ಪ್ರಕಟ ಆಗುವ “ಹಿಂಗಾರದ” ಹೆಚ್ಚಿನ ಪುಸ್ತಕಗಳ್ಲಿ ಇವರ ಲೇಖನಗ ಉಟ್ಟು. ‘ಮನೆ ಚಿಂಟೇಲಿ”ಂತ ಶೀರ್ಷಿಕೆಲಿ ’ಸುದ್ದಿವಾರ ಪತ್ರಿಕೆ’ಲಿ ಆಗಾಗ ಸಾಮಾಜಿಕ ಮತ್ತೆ ಹಿರಿಯರ ಬದುಕ್‌ನ ಕಥೆಗೆ ಪ್ರಕಟ ಆಗ್ತಾ ಇದ್ದದೆ.

ಡಾ। ಕೆ.ವಿ.ಜಿ.ಯವರ 75ನೇ ಹುಟ್ಟು ಹಬ್ಬದ ಲೆಕ್ಕಲಿ ಪ್ರಕಟ ಆದ ಬಾರಿ ದೊಡ್ಡ ನೆಂಪುನ ಪುಸ್ತಕಗ "ಅಮರಶ್ರೀ ಮತ್ತೆ ಅನನ್ಯ" ಇದರ ಸಂಪಾದಕ ಮಂಡಳಿ ಸದಸ್ಯ ಆಗಿ; ಅನೇಕ ಸ್ಮರಣ ಸಂಚಿಕೆಗಳ ಸಂಪಾದಕರಾಗಿ, ಉಪಸಂಪಾದಕರಾಗಿ, ಸಂಪಾದಕ ಮಂಡಳಿ ಸದಸ್ಯರಾಗಿ ಅಲ್ಲದೆ ತುಂಬಾ ಪುಸ್ತಕಗಳಿಗೆ ಬರಹಗಳ ಬರ್ದ್ ಕೊಟ್ಟ ದಾಖಲೆಗ ಇವರ್ದ್.  ರಾಜಕೀಯವಾಗಿ, ಮಾಜಿ ಗ್ರಾಮ ಪಂಚಾಯತ್ ಸದಸ್ಯರ್, ತಾಲೂಕು ಮಟ್ಟಲಿ ಕೂಡ ರಾಜಕೀಯ ಪಕ್ಷದ ಉಪಾಧ್ಯಕ್ಷರಾಗಿ ಕೆಲ್ಸ ಮಾಡ್ದೋವು. ಸಹಕಾರಿ ಸಂಘಲಿ ಕೂಡ ನಿರ್ದೇಶಕರಾಗಿ ಸೇವೆ, ಸಮಾಜಿಕವಾಗಿ, ಶ್ರೀ ಕ್ಷೇತ್ರ ಧರ್ಮಸ್ಥಳ ಜನ ಜಾಗೃತಿ ವೇದಿಕೆನ ನಿಕಟ ಪೂರ್ವ ಅಧ್ಯಕ್ಷರಾಗಿ, 2004ರ್‌ಂದ ಮದ್ಯವರ್ಜನ ಶಿಬಿರಗಳ ಮೂಲಕ ಸಾವಿರಾರ್ ಕುಟುಂಬಗಳ ಬದುಕು ಕಟ್ಟಿಕಂಕ್ಕೆ ಪೂರಕ ಆಗಿ ಕೆಲ್ಸ ಮಾಡ್ದೊವು, ದ.ಕ. ಗೌಡ ವಿದ್ಯಾ  ಸಂಘಲಿ ಸತತ  4ನೇ ಬಾರಿ ನಿರ್ದೇಶಕರಾಗಿ, ಗೌಡ ಯುವ ಸಂಘಲಿ ಅರಂತೋಡು ವಲಯದ ಉಪಾಧ್ಯಕ್ಷರಾಗಿ, ಉಸ್ತುವಾರಿ ನಿರ್ದೇಶಕರಾಗಿ, ವಿವಿಧ ಸಂಘ ಸಂಸ್ಥೆಗಳ್ಲಿ ತೊಡಗಿಸಿಕೊಂಡೊವು. ಧಾರ್ಮಿಕವಾಗಿ, ಶ್ರೀ ಮಲ್ಲಿಕಾರ್ಜುನ ದೇವಸ್ಥಾನ ತೊಡಿಕಾನದ ಆಡಳಿತ ಸಮಿತಿನ ಮಾಜಿ ನಿರ್ದೇಶಕರಾಗಿ, ಜೀರ್ಣೋದ್ಧಾರ ಸಮಿತಿನ ಸದಸ್ಯರಾಗಿ ಕೆಲ್ಸ ಮಾಡ್ದೋವು. ಯುವಕ ಮಂಡಲ, ರೋಟರಿ ಗ್ರಾಮಿಣದಳ ಹೀಂಗೆ ಉದ್ಯೋಗದೊಟ್ಟಿಗೆ ಬೇರೆ ಬೇರೆ ಸಂಘಸಂಸ್ಥೆಗಳಲ್ಲಿ ಕೆಲ್ಸ ಮಾಡಿ,  ನಾಟಕ ಅಭಿನಯ, ಕಿರು ಚಿತ್ರ ಅಭಿನಯ, ಕಲೆ, ಸಾಹಿತ್ಯಂತೇಳಿ ಈಗೊಳು ಎಲ್ಲರೊಟ್ಟಿಗೆ ಬೆರ್ತ್ ಖುಷಿ ಪಡುವ ಜೀವನ ಇವರ್ದ್. ಹೆಣ್ಣ್ ಶ್ರೀಮತಿ ಜಯಲತ, ಇಬ್ಬರ್ ಮಕ್ಕ ನಿಶ್ಚಿತ್ ಅಡ್ತಲೆ ಅಂತಿಮ ವರ್ಷದ ಎಂ.ಕಾಂ. ಮತ್ತೆ ದೀಕ್ಷಿತ್ ಅಡ್ತಲೆ ಇಮೆಜಿನ್ ಟೆಕ್ನಲಾಜಿ (ಬಿ.ಎಸ್.ಸಿ.ಐ.ಟಿ.) ಮಂಗಳೂರು ಮಂಗಳ ಕಾಲೇಜಿಲಿ ಕಲ್ತ್, ಕೆ.ಎಂ.ಸಿ. ಮಂಗಳೂರು ಇಲ್ಲಿ ಇಂಟರ್‌ನ್‌ಶಿಫ್ ಮಾಡ್ತಾ ಉಟ್ಟು. ದೈವ ದೇವರ್‌ಗಳ ನಂಬಿಕಂಡಿರುವ ಸುಖೀ ಕುಟುಂಬ ಇವರ್ದ್.

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ

ರೂ. 100/-